# ಸಿದ್ಧಗಂಗಾ

ಸಂಪುಟ-30. ಸಂಚಿಕೆ 11 ನವಂಬರ್—1994.

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಜಾತಿ ಮತ ಕುಲಗೋತ್ರ ವರ್ಣಗಿರ್ಣವಗಣಿಸೆ
ನೀತಿನಿಯತ್ತುಗಳ ನೀ ತಂದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

§ § §

“ಪರಮ ಪರತತ್ವ ಪರಮಾರ್ಥ” ರೂಪವೆ
ಸರಳ ಸಾಕಾರ ನಿಜದಿರವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

§ § §

ನಾಮ ಸೀಮೆಯಮೀರಿ ಬೆಳೆದ ಕಾರುಣ್ಯವೆ
ಕಾಮ ಕ್ರೋಧವಗೆದ್ದ ಭವ್ಯವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

— ಹೆಚ್. ವಿ. ವೀರಭದ್ರಯ್ಯ.



# ಶ್ರೀವಾಣಿ

## ಹುಣಸೆ-ಬೇವು

ಒಂದೂರಿನಲ್ಲಿ ಇಬ್ಬರು ಮಹಾ ವೈದ್ಯರಿದ್ದರು. ಆಯುರ್ವೇದದಲ್ಲಿ ಘನ ಪಾಂಡಿತ್ಯ ಗಳಿಸಿದ್ದರು. ಸಮಾಜದಲ್ಲಿ ಘನತೆ, ಪ್ರತಿಷ್ಠೆಗಳನ್ನು ಪಡೆದಿದ್ದರು- ರೋಗಿಗಳನ್ನು ಕೇವಲ ನೋಡುವ ಷ್ವರಿಂದಲೇ ಸಮಸ್ಯೆಯನ್ನು ತಿಳಿಯಬಲ್ಲವರಾಗಿದ್ದರು. ಪರಿಹಾರವನ್ನು ಸೂಚಿಸುವ ಜಾಣ್ಮೆ ಅವರಲ್ಲಿತ್ತು ಆದರೆ ಇಬ್ಬರೂ ವಾಸಿಸುತ್ತಿದ್ದ ಪರಿಸರ ಭಿನ್ನವಾಗಿತ್ತು.

ಒಮ್ಮೆ ಯಾವುದೋ ಕಾರಣಕ್ಕೆ ಪರಸ್ಪರ ಭಿನ್ನಾಭಿಪ್ರಾಯ ಉಂಟಾಗಿ ಒಂದೇ ಊರಿನಲ್ಲಿ ವಾಸಿಸುತ್ತಿದ್ದ ಇಬ್ಬರೂ ದೂರ ದೂರದ ಗ್ರಾಮಗಳಲ್ಲಿ ವಾಸಿಸತೊಡಗಿದರು. ಹೀಗಿರುವಾಗ ಒಬ್ಬ ವೈದ್ಯ ಒಂದು ಕಾಗದ ಬರೆದು ತನ್ನ ಆತ್ಮೀಯನೊಬ್ಬನನ್ನು ಕರೆದು ಆ ಕಾಗದವನ್ನು ಬೇರೆ ಊರಿನಲ್ಲಿದ್ದ ವೈದ್ಯನಿಗೆ ಕೊಟ್ಟು ಬರುವಂತೆ ತಿಳಿಸಿದ. ಮತ್ತು ಒಂದು ಮಾತನ್ನು ಹೇಳಿದ ಹೋಗುವಾಗ ದಾರಿಯುದ್ದಕ್ಕೂ ಬೆಳೆದಿರುವ ಹುಣಸೆ ಮರದಡಿಯಲ್ಲಿ ಮಲಗು ಹುಣಸೆ ಸೌದೆಯಿಂದಲೇ ಆಹಾರ ಸಿದ್ಧಪಡಿಸಿಕೋ, ಹುಣಸೆ ನೆರಳಿನಲ್ಲಿಯೇ ವಿಶ್ರಮಿಸು ಎಂಬುದಾಗಿ ಸೂಚಿಸಿದ. ಕಾಗದ ತೆಗೆದುಕೊಂಡು ಹೊರಟ ವ್ಯಕ್ತಿ ತುಂಬಾ ಆರೋಗ್ಯವಂತನಾಗಿದ್ದ, ದೃಢ ಕಾಯನಾಗಿದ್ದ, ಸುಂದರನಾಗಿದ್ದ. ದಾರಿ ನಡೆಯುತ್ತಾ ತನ್ನ ವೈದ್ಯ ಹೇಳಿದಂತೆ ಹುಣಸೆ ಸಾಲು ಮರಗಳಡಿ ಮಲಗುತ್ತಾ, ಅವುಗಳ ನೆರಳಿನಲ್ಲಿಯೇ ವಿಶ್ರಮಿಸುತ್ತಾ, ಅವುಗಳ ಸೌದೆಯಿಂದಲೇ ಆಹಾಠ ತಯಾರಿಸುತ್ತ ನಡೆದ. ಬರಬರುತ್ತಾ ಕೃಶಕಾಯನಾದ, ವಿಕೃತ ರೂಪಿಯಾದ, ಆರೋಗ್ಯ ಕಳೆದುಕೊಂಡ ವೈದ್ಯರು ಹೇಳಿದ್ದ ಹಾಗೆ ನಡೆದುಕೊಂಡಿದ್ದ. ಕೊನೆಗೆ ಪರವೂರಿನಲ್ಲಿದ್ದ ವೈದ್ಯರ ಬಳಿಗೆ ಬಂದ. ಅವನನ್ನು ನೋಡುತ್ತಿದ್ದಂತೆಯೇ ಆ ವೈದ್ಯ

ನಿಗೆ ಅರಿವಾಯಿತು. ಹುಣಸೆಯ ಸಂಬಂಧವಾಗಿ ಬಳಿಗೆ ಬಂದಿರುವ ವ್ಯಕ್ತಿಗೆ ವಿಪರೀತ ಪರಿಣಾಮವಾಗಿದೆ ಎಂಬುದು. ಅವನಿಂದ ವಿಷಯ ಕೇಳಿ ತಿಳಿದುಕೊಂಡ. ತನ್ನ ಅನಿಸಿಕೆಯನ್ನು ಧೃಢ ಮಾಡಿಕೊಂಡ. ತನ್ನ ಪರಿಚಿತವೈದ್ಯನಿಂದ ಬಂದ ಕಾಗದವನ್ನು ನೋಡಿಕೊಂಡ. ಅದು ವ್ಯಕ್ತಿಯ ಅನಾರೋಗ್ಯಕ್ಕೆ ಸಂಬಂಧಿಸಿದುದೇನೂ ಆಗಿರಲಿಲ್ಲ. ಅನಂತರ ವೈದ್ಯ ಆ ವ್ಯಕ್ತಿಗೆ ಹೀಗೆ ತಿಳಿಸಿದ. ನೀನು ಹಿಂದಿರುಗಿ ಪ್ರಯಾಣಿಸುವಾಗ ಬೇವಿನ ಮರದ ನೆರಳಿನಲ್ಲಿ ವಿಶ್ರಮಿಸು, ಮಲಗು, ಅದರ ಸೌದೆಯಿಂದಲೇ ಅಡಿಗೆ ಮಾಡಿ ಊಟ ಮಾಡುತ್ತ ಹೋಗು ಎಂದ. ಸರಿ ಆ ವ್ಯಕ್ತಿ ಈ ವೈದ್ಯ ಹೇಳಿದಂತೆಯೇ ದಾರಿಯುದ್ದಕ್ಕೂ ಸಿಕ್ಕುವ ಬೇವಿನ ಮರದ ನೆರಳಲ್ಲಿ ವಿರಮಿಸುತ್ತ, ಮಲಗುತ್ತ, ಅದರ ಸೌದೆಯಿಂದಲೇ ಅಡಿಗೆ ಮಾಡಿಕೊಳ್ಳುತ್ತಾ ತನ್ನ ಊರು ಸೇರಿದ. ಊರು ಸೇರಿದಾಗ ಮೊದಲಿನಂತೆ ಆರೋಗ್ಯವಂತನಾಗಿದ್ದ, ದೃಢಕಾಯನಾಗಿದ್ದ, ಸುಂದರನಾಗಿದ್ದ ಆ ಊರಿನಲ್ಲಿದ್ದ ವೈದ್ಯ ವ್ಯಕ್ತಿಯನ್ನು ಕೇಳಿದ. ಬರುವಾಗ ಬೇವಿನ ಮರದ ನೆರಳನ್ನಾಶ್ರಯಿಸಿ ಬಂದೆಯಾ ಎಂದು ವ್ಯಕ್ತಿ ಹೌದೆಂದ. ಹುಣಸೆ–ಬೇವುಗಳ ಒಳಗುಟ್ಟನ್ನು ಅರಿತಿದ್ದ ಆ ಇಬ್ಬರು ವೈದ್ಯರು ರೋಗಿಗಳ ಶುಶ್ರೂಷೆಯೇ ತಮ್ಮ ತಪಸ್ಸು ಎಂದು ತಿಳಿದಿದ್ದರು. ಒಬ್ಬರ ಗುಟ್ಟು ಒಬ್ಬರಿಗೆ ಗೊತ್ತಿದ್ದಿತು. ಆದರೆ ಅದನೆಂದೂ ಅವರು ವಿನಾಶಕ್ಕೆ ಬಳಸಲಿಲ್ಲ. ಬದಲಾಗಿ ವಿಕಾಸಕ್ಕಾಗಿ ಬಳಸಿದರು. ಪರಿಸರದ ಪ್ರಜ್ಞೆ ತಿಳಿದು ಬದುಕುವುದು ವಿವೇಕದ ಲಕ್ಷಣ.

(26-10-94 ರಂದು ಟಿ. ನರಸೀಪುರ ತಾ|| ಮಾಡ್ರಹಳ್ಳಿ ಶ್ರೀಮಠದ ಶಿವಾನುಭವ ಗೋಷ್ಠಿಯಲ್ಲಿ ಮಾಡಿದ ಆಶೀರ್ವಚನದಿಂದ ಸಂಗ್ರಹ)



## ಶ್ರೀ ಸಿದ್ಧಲಿಂಗೇಶ್ವರ ವಚನ



ತತ್ತ್ವಾರ್ಥ ಬಲ್ಲೆವೆಂಬರಯ್ಯಾ ತತ್ತಿಯೊಳಗಣ ಬಾಲಕರು !
ತತ್ತ್ವಾನುಭವ ಸಂಭವಿಸಿದರೆ ಸತ್ತು ಹೋಗಲುಂಟೆ ?
ಸತ್ತು ಹೋಗುವ ಪ್ರಾಣಿಗಳ ಶಿವತತ್ತ್ವಾನುಭವಿಗಳೆಂತೆಂಬೆನಯ್ಯಾ ?
ಅನುಪಮ ಅದ್ವಯರೆಂತೆಂಬೆನಯ್ಯಾ ?
ಮಹಾಲಿಂಗ ಗುರು ಶಿವಸಿದ್ದೇಶ್ವರ ಪ್ರಭುವೇ ?

ಎಷ್ಟೋ ಜನರು ಶಿವತತ್ತ್ವಾನುಭವವಿಲ್ಲದವರಾಗಿದ್ದರೂ ತಾವು ಶಿವತತ್ತ್ವಾರ್ಥವನ್ನು ಬಲ್ಲವರೆಂದು ಹೇಳುವರು. ಒಂದು ವೇಳೆ ಅವರು ತತ್ತ್ವಾನುಭವಿಗಳೇ ಆಗಿದ್ದರೆ ಅವರೆಂತು ಸಾಯಬಲ್ಲರು ! ಸತ್ತು ಹೋಗುವ ಅಜ್ಞಾನಿಗಳೆಲ್ಲ ಶಿವತತ್ವಾನುಭವಿಗಳಾಗಲು ಸಾಧ್ಯವಿಲ್ಲ. ಶಿವತತ್ವಾನುಭವಿಗಳು ಜನನ ಮರಣ ರೂಪ ಚಕ್ರದಿಂದ ಪಾರಾಗಿ ತಮ್ಮ ನಿಜ ಸ್ಥಿತಿಯಲ್ಲೇ ಉಳಿದುಕೊಂಡು ನಿರತಿಶಯವಾದ ಆನಂದವನ್ನು ಅನುಭವಿಸುವರು. ಅಕ್ಷಯವೂ, ನಿರಾಲಂಬವೂ, ಅದ್ವಯವೂ ಆದ ಸುಖವನ್ನು ಅನುಭವಿಸುವ ಅಧಿಕಾರವು ಶಿವತತ್ತ್ವಾನುಭಾವಿಗಳಿಗೆ ಮಾತ್ರ ಮೀಸಲಾಗಿರುವುದು.

[ಕೃಪೆ: ಷಟ್‌ಸ್ಥಲ ಜ್ಞಾನಸಾರಾಮೃತ, ಶ್ರೀ ತೋ. ಸಿ. ಕೈ. ಸೇ. ಸಂಘ
ಎಡೆಯೂರು–ಗದಗ]

## ಸಿದ್ಧಗಂಗಾ ಮಾಸ ಪತ್ರಿಕೆ

**ಸಂಪಾದಕ ಮಂಡಳಿ :**

**ಚನ್ನಪ್ಪ ಎರೇಸೀಮೆ**
ಪ್ರಧಾನ ಸಂಪಾದಕರು.

**ಹೆಚ್. ವಿ. ವೀರಭದ್ರಯ್ಯ**
ಸಂಪಾದಕರು

**ಎಂ. ರೇಣುಕಾರಾಧ್ಯ**
ಸಹ ಸಂಪಾದಕರು

**ಹೆಚ್. ಬಿ. ಗಂಗಾಧರಯ್ಯ**
ಪ್ರಕಾಶಕರು

* * *

**ಸಲಹಾಸಮಿತಿ :**

ಡಾ|| ಎಂ. ಎನ್. ಚನ್ನಬಸಪ್ಪ
ಡಾ|| ಹೆಚ್. ತಿಪ್ಪೇರುದ್ರಸ್ವಾಮಿಗಳು
ಪ್ರೊ|| ಜಿ. ಎಸ್. ಸಿದ್ಧಲಿಂಗಯ್ಯ
ಗೊ. ರು. ಚನ್ನಬಸಪ್ಪ
ಎಚ್. ಎಸ್. ನರಸಿಂಹಜೀಯರ್
ಟಿ. ಆರ್. ಮಹದೇವಯ್ಯ
ಬಿ. ವೀರಭದ್ರಯ್ಯ
ಪಿ. ಎನ್. ಚಂದ್ರಶೇಖರಯ್ಯ

* * *

**ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ**
ಮುದ್ರಕರು.

* * *

ಶ್ರೀ ಸಿದ್ಧಗಂಗಾಕ್ಷೇತ್ರ
ಪ್ರಕಟಣೆಯ ಸ್ಥಳ.


### ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ಶ್ರೀ ಸಿದ್ಧಗಂಗಾ ಮಠದಿಂದ ಪ್ರಕಟವಾಗುತ್ತಿರುವ ಮಾಸ ಪತ್ರಿಕೆ. ಶ್ರೀ ಮಠದ ಹಳೆಯ ವಿದ್ಯಾರ್ಥಿ ಸಂಘದ ಹೆಮ್ಮೆಯ ಸೇವಾ ಪುರವಣಿ ಮೇಲಾಗಿ ಶ್ರೀ ಮಠದ ಮುಖವಾಣಿ, ಪೂಜ್ಯ ಡಾ|| ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ದಿವ್ಯ ಮಾರ್ಗದರ್ಶನದಲ್ಲಿ **30ನೇ ವರ್ಷಕ್ಕೆ ಪಾದಾರ್ಪಣೆ ಮಾಡಿದೆ. ತ್ರಿವಿಧ ದಾಸೋಹ ತತ್ಪರತೆಯಿಂದ ಮುನ್ನಡೆಯುತ್ತಿರುವ ಪತ್ರಿಕೆ** ಈ ಧ್ಯೇಯ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಧರ್ಮ. ವಿಜ್ಞಾನ, ಶಿಕ್ಷಣ. ಇತಿಹಾಸ, ವೈಚಾರಿಕ ಚಿಂತನ ಮುಂತಾದ ಲೇಖನಗಳನ್ನು ಸ್ವಾಗತಿಸುತ್ತದೆ ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆ ಸ್ಟಾಂಪುಗಳನ್ನು ಲಗತ್ತಿಸಿರಬೇಕು. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನಗಳಿಗೆ ಸೂಕ್ತ ಸಂಭಾವನೆ ಕೊಡಲಾಗುವುದು.


" ಸಂಪಾದಕರು ",
**'ಸಿದ್ಧಗಂಗಾ' ಮಾಸ ಪತ್ರಿಕೆ**
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ-572104.



**ಚಂದಾ ದರ**
ವಾರ್ಷಿಕ ಚಂದಾ 30-00ರೂ
ಆಜೀವ ಸದಸ್ಯತ್ವ 350-00


## ಸಿರಿವಚನ ಸಾಹಿತ್ಯ ವರ ಪುತ್ರ

ಮಾನ್ಯ ತಿಪ್ಪೇರುದ್ರಸ್ವಾಮಿಗಳ ಗೌರವದಿ
ಸನ್ಮಾನಿಸಲು ಬನ್ನಿ ಸೋದರರೇ ಸಮ್ಮುದದಿ ||ಪ||

ವೈಮಾತು ಮನಗಳಲ್ಲೊಂದಾಗಿ ಕೃತಿಗೈವ
ಪ್ರೇಮದಿಂದನವರತ ಶರಣ ಮಾರ್ಗವನೊರೆವ
ಭೂಮ ಚಿಂತನ -ಸರಳ ಜೀವನವ ಸಾಗಿಸುವ
ಸೋಮಧರ ತಾಮೆಚ್ಚಿ ಅಹುದೆಂಬವೋಲ್ಬಾಳ್ವ ||೧||

ಜತಿಮತ ಲೆಕ್ಕಿಸದ ಗುಣಮಾತ್ರಮನ್ನಿಸುವ
ನೀತಿನಿಯಮಕೆ ಹೋರಿ ಸತ್ಪಥದೊಳಡಿಯಿಡುವ
ಜೋತು ಬೀಳದೆ ಜಗಕೆ ಋಜುಮಾರ್ಗದೊಳು ನಡೆವ
ಪ್ರೀತಿಯಿಂ ಸರ್ವರನು ಸಮನಾಗಿ ಭಾವಿಸುವ ||೨||

ಹಿಡಿದುದನು ಕಡೆತನಕ ಬಿಡದೆ ಸಲೆ ಸಾಧಿಸುವ
ಬಡವ ಬಲ್ಲಿದರೆಂಬ ಭೇಧ ಭಾವವ ತೊಡೆವ
ನುಡಿಯಿಂದ ಬೋಧಿಸದೆ ನಡೆಯಿಂದ ಬೋಧಿಸುವ
ಮೃಢ ಶರಣರಡಿಯಿಟ್ಟ ಹಾದಿ ಮಾತ್ರವ ತುಳಿವ ||೩||

ಸಿರಿವಚನ ಸಾಹಿತ್ಯದಮರ ಸಾಹಿತಿಯಾದ
ಪರತರಾಧ್ಯಾತ್ಮ ತತ್ವಾರ್ಥ ಕೋವಿದರಾದ
ಗುರುತರದ ಕೈವಲ್ಯಶಾಸ್ತ್ರ ಪರಿಣತರಾದ
ತಿರೆಯೊಳೆಲ್ಲರ ಸೆಳೆವ ಮಧುರವಾಗ್ಮಿಗಳಾದ ||೪||

ಶರಣ ಚಾರಿತ್ರ್ಯಗಳ ಕಾದಂಬರಿಯೊಳೊರೆವ
ಪರಮ ಗೂಡಾರ್ಥವನು ಬಹು ಸುಲಭದಿಂ ಪೇಳ್ವ
ಪರಿಪರಿಯ ಸಾಹಿತ್ಯ ಪ್ರಾಕಾರಗಳ ಬರೆವ
ಸರಸತಿಯ ವರಪುತ್ರ ತಾವೆನಿಸಿ ಮಿಗೆ ಮೆರೆವ ||೫||

ಅಖಿಲ ಭಾರತ ವಚನ ಸಾಹಿತ್ಯ ಪರಿಷತ್, ಮೈಸೂರು. ದಿನಾಂಕ 26-12-93ರಂದು ಸನ್ಮಾನಿಸಿದಾಗ ವಾಚಿಸಿದ ಕವನ.


ಪಿ. ಬಸವಣ್ಣನವರಂ, ಶ್ರೀ ನಿಜಗುಣ ಕ್ಷೇತ್ರ ಕೊಳ್ಳೇಗಾಲ ತಾ||
ಮೈಸೂರು ಜಿಲ್ಲೆ.

## ಭಕ್ತಿ ಪೂರ್ವಕ ಶ್ರದ್ಧಾಂಜಲಿ

ದಿನಾಂಕ 10-11-1994 ರಂದು ಯುಗದ ಕವಿ ರಸಋಷಿ ಕುವೆಂಪು ಅವರು ನಿಧನರಾದುದಕ್ಕೆ ಸಿದ್ಧಗಂಗಾ ಅತೀವ ಶೋಕಕ್ಕೆ ಒಳಗಾಗಿದೆ.

ಡಾ॥ ಕೆ.ವಿ. ಪುಟ್ಟಪ್ಪನವರು ಕಾವ್ಯನಾಮದ ಮೂಲಕ ಕನ್ನಡದ ಪಸ್ಸು ಮಾಡಿದ ಮಹಾ ಮಾನವತಾವಾದಿಯಾಗಿದ್ದರು. ಅವರು ನೀಡಿದ "ವಿಶ್ವಮಾನವ'' ಸಂದೇಶ ಚಿರಂತನವಾದುದು. ತಮ್ಮ ಅಮೂಲ್ಯ ಕೃತಿಗಳ ಮೂಲಕ ಕನ್ನಡ ಸಾಹಿತ್ಯ ಸಂಸ್ಕೃತಿಯನ್ನು ಶ್ರೀಮಂತಗೊಳಿಸಿದ ರಾಷ್ಟ್ರ ಕವಿ ಕುವೆಂಪುರವರು ಜ್ಞಾನಪೀಠ ಪ್ರಶಸ್ತಿ ವಿಜೇತರಾಗಿದ್ದರು. 'ಶ್ರೀ ರಾಮಾಯಣ ದರ್ಶನ' ಮಹಾ ಕಾವ್ಯವನ್ನು ರಚಿಸಿದ ಲೋಕದ ಕವಿ ಎನಿಸಿದ್ದರು.

ಉಪನ್ಯಾಸಕರಾಗಿ, ಪ್ರಾಧ್ಯಾಪಕರಾಗಿ ಕುಲಪತಿಗಳಾಗಿ ಅಪಾರ ವಿದ್ವಾಂಸರನ್ನು ರೂಪಿಸಿದ್ದರು- ನಾಡು ನುಡಿಗೆ ತಮ್ಮನ್ನು ಸಮರ್ಪಿಸಿಕೊಂಡಿದ್ದರು. ಧೀಮಂತ ಕನ್ನಡ ಋಷಿ ಸದೃಶರಾದ ಕುವೆಂಪು ಅವರ ನಿಧನದಿಂದ ನಾಡಿಗೆ ನುಡಿಗೆ ತುಂಬಲಾರದ ನಷ್ಟವಾಗಿದೆ.

ಕುವೆಂಪು ಅವರ ಕುಟುಂಬವರ್ಗದವರಿಗೆ ಅವರ ಅಗಲಿಕೆಯ ನೋವನ್ನು ಸಹಿಸುವ ಶಕ್ತಿಯನ್ನು ದಯಾಮಯನು ನೀಡಲೆಂದು ಪ್ರಾರ್ಥಿಸುತ್ತಾ ಅಗಲಿದ ಕವಿಗಳ ಆತ್ಮಕ್ಕೆ ಶಾಂತಿಯನ್ನು ನೀಡಲೆಂದು "ಸಿದ್ಧಗಂಗಾ'' ತನ್ನ ಭಕ್ತಿ ಪೂರ್ವಕ ಶ್ರದ್ಧಾಂಜಲಿಯನ್ನು ಅರ್ಪಿಸಿದೆ.

## ಸಂಪಾದಕೀಯ

### ಡಾ॥ ಎಚ್. ತಿಪ್ಪೇರುದ್ರಸ್ವಾಮಿಗಳು

ಡಾ॥ ತಿಪ್ಪೇರುದ್ರಸ್ವಾಮಿಗಳು ದಿನಾಂಕ 28-10-91ರಂದು ಪ್ರಾತಃಕಾಲ 6 ಘಂಟೆ 20 ನಿಮಿಷಗಳಲ್ಲಿ ಲಿಂಗೈಕ್ಯರಾದರು. ಸಮಾಜಕ್ಕೆ ತುಂಬಲಾರದ ನಷ್ಟವಾಯಿತು. ವಿದ್ವತ್ ಜಗತ್ತಿನ ಶಾಂತದೀಪ ಇನ್ನಿಲ್ಲವಾಯಿತು. ಸಂಶೋಧನೆಯ ಸಮ್ಯಕ್ ದಾರ್ಶನಿಕರೊಬ್ಬರು ಕಣ್ಮರೆಯಾದರು. ಶರಣ ಸಾಹಿತ್ಯ ದೇವಕೃಷಿಕ ನೆನಪಾಗಿ ಹೋದರು. ಶಿವಾನುಭವಿಯೊಬ್ಬರನ್ನು ಕಳೆದುಕೊಂಡ ಶರಣಧರ್ಮ ಬಡವಾಯಿತು. ಬಸವನಿಷ್ಠೆ ಚೇತನ ಒಂದನ್ನು "ಕೂಡಲ ಸಂಗ ತನಗೆ ಬೇಕೆಂದೆತ್ತಿಕೊಂಡ." ಮಠಾಧಿಪತಿಗಳು, ಶರಣ ಧರ್ಮಪ್ರೇಮಿಗಳು, ಬಸವತತ್ವಾಭಿಮಾನಿಗಳು, ಡಾ॥ ಸ್ವಾಮಿಯವರ ಬಂಧುಗಳು, ಸ್ನೇಹಿತರು, ಶಿಷ್ಯರು, ಅಭಿಮಾನಿಗಳು. ಕನ್ನಡ ಕುಲಕೋಟಿ ಕಣ್ಣೀರಿಟ್ಟರು. ಪತ್ರಿಕೆಗಳು, ದೂರದರ್ಶನ, ಆಕಾಶವಾಣಿ, ರಾಜ್ಯ ಸರ್ಕಾರದ ವರಿಷ್ಠರು, ಕನ್ನಡ ಸಾಹಿತ್ಯ ಪರಿಷತ್, ಅಕಾಡೆಮಿ, ವಿವಿಧ ಸಂಘಸಂಸ್ಥೆಗಳು ಅಗಲಿದ ಡಾ॥ ಸ್ವಾಮಿಯವರ ಸೇವಾ ಕೈಂಕರ್ಯವನ್ನು ಮುಕ್ತಕಂಠದಿಂದ ಪ್ರಶಂಸಿಸಿದವು.

ಡಾ॥ ಎಚ್. ತಿಪ್ಪೇರುದ್ರಸ್ವಾಮಿಯವರು ಹುಟ್ಟಿದ್ದು 3-2-1928. ಶಿವಮೊಗ್ಗ ಜಿಲ್ಲೆ ಹೊನ್ನಾಳಿಯಲ್ಲಿ. ಶರಣ ಸಾತ್ವಿಕ ಸಂಪನ್ನ ಕುಟುಂಬದಲ್ಲಿ. 1952ರಲ್ಲಿ ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಎಂ.ಎ. ಪ್ರಥಮರ್‍ಯಾಂಕು ಪಡೆದು ಹಾಸನದ ಸರಕಾರಿ ಕಾಲೇಜಿನಲ್ಲಿ ಉಪನ್ಯಾಸಕರಾಗಿ ವೃತ್ತಿ ಜೀವನವನ್ನಾರಂಭಿಸಿ, ಮೈಸೂರು, ಶಿವಮೊಗ್ಗ, ಮಹಾರಾಣಿ ಕಾಲೇಜು, ಮಾನಸ ಗಂಗೋತ್ರಿಗಳಲ್ಲಿ ಪ್ರಾಧ್ಯಾಪಕರಾಗಿ, ಕನ್ನಡ ಅಧ್ಯಯನ ಸಂಸ್ಥೆಯ ನಿರ್ದೇಶಕರಾಗಿ 1988ರ ಫೆಬ್ರವರಿಯಲ್ಲಿ ನಿವೃತ್ತರಾದರು.

ಡಾ॥ ತಿಪ್ಪೇರುದ್ರಸ್ವಾಮಿಯವರಿಗೆ ಸಂದ ಪ್ರಶಸ್ತಿಗಳು ನೂರಾರು. ಸರ್ಕಾರ, ಸಮಾಜ ಅವರನ್ನು ಗೌರವಿಸಿ ಸಂತೋಷಿಸಿದವು. 1962ರಲ್ಲಿ ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ 1968ರಲ್ಲಿ ಕೇಂದ್ರ ಸಾಹಿತ್ಯ ಅಕಾಡೆಮಿಪ್ರಶಸ್ತಿ, 1980ರಲ್ಲಿ ಹುಬ್ಬಳ್ಳಿ ಮೂರುಸಾವಿರಮಠದ ಧರ್ಮ ಪ್ರಚಾರಕ ಮಂಡಲದ ಪ್ರಥಮ ಪ್ರಶಸ್ತಿ, 1981ರಲ್ಲಿ ಇಲಕಲ್ಲಿನ ಶ್ರೀ ವಿಜಯಮಹಾಂತೇಶ್ವರ ಮಠದ ಸಾಹಿತ್ಯ ಪ್ರಶಸ್ತಿ, 1985ರಲ್ಲಿ ಕರ್ನಾಟಕ ಸಾಹಿತ್ಯ ಅಕಾಡೆಮಿಯ ಗೌರವ ಪ್ರಶಸ್ತಿ,1984ರಲ್ಲಿ ಇಲಕಲ್ಲಿನ ಶ್ರೀ ವಿಜಯಮಹಂತೇಶ್ವರಸ್ವಾಮಿಗಳ 12ನೇ ಪಟ್ಟಾಭಿಷೇಕೋತ್ಸವದ ತುಲಾಭಾರ', 1989ರಲ್ಲಿ ಶ್ರೀ ಸಿದ್ಧಗಂಗಾಮಠದ ಪರಮ ಪೂಜ್ಯ ಡಾ॥ ಶ್ರೀ ಶ್ರೀ ಶಿವಕುಮಾರಸ್ವಾಮಿಗಳವರ ಜನ್ಮದಿನಾಚರಣೆಯ ಸತ್ಕಾರ ಮುಂತಾದುವು ಅವರಿಗೆ ಸಂದ ಕೆಲವು ಪ್ರಶಸ್ತಿಗಳು.

ಡಾ॥ ಸ್ವಾಮಿಯವರ ಸಾಹಿತ್ಯ ಸೇವೆ ಗಣನೀಯವಾದುದು. ಮೌಲಿಕವಾದುದು. ಪಂಡಿತ ಪಾಮರರೆಲ್ಲ ತಲೆದೂಗುವಂತಹದು. ಪರಿಪೂರ್ಣದೆಡೆಗೆ, ಕದಳಿಯ ಕರ್ಪೂರ, ಜ್ಯೋತಿ ಬೆಳಗುತಿದೆ, ಕರ್ತಾರನಕಮ್ಮಟ, ವಿಜಯ ಕಲ್ಯಾಣ, ವಚನ ವಿರೂಪಾಕ್ಷ, ಸತ್ಯಾಶ್ರಯ ಸಾಮ್ರಾಜ್ಯ, ನೆರಳಾಚೆಯಬೆಳಗು, ಜಡದಲ್ಲಿ ಜಂಗಮ, ಶಿಸ್ತುಗಾರ ಶಿವಪ್ಪನಾಯಕ, ಅಳಿವಿನಿಂದ ಉಳಿವಿಗೆ. ಇವು ಕಾದಂಬರೀ ರೂಪದಲ್ಲಿ ಬೆಳಕು ಕಂಡ ಕೃತಿಗಳು. ವಿಧಿ ಪಂಜರ ಶರಣರ ಮೂರು ನಾಟಕಗಳು, ಶ್ರೀ ನಿಜಗುಣ ಶಿವಯೋಗಿ ನಾಟಕಗಳು. ಸಣ್ಣ ಕತೆಗಳಾಗಿ ಸಾಹಿತ್ಯ ಚಿತ್ರಗಳು ಪ್ರಕಟವಾದವು. ತಪೋರಂಗ ಕವನ ಸಂಕಲನವಾಗಿವೆ. ಶರಣರ ಅನುಭಾವ ಸಾಹಿತ್ಯ, ವಚನಗಳಲ್ಲಿ ವೀರಶೈವಧರ್ಮ, ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಶೂನ್ಯ ತತ್ವ ವಿಕಾಸ ಮತ್ತು ಶೂನ್ಯ ಸಂಪಾದನೆ, ಕರ್ನಾಟಕ ಶರಣ ಕಥಾಮೃತಗಳು ಮಹಾಪ್ರಬಂಧಗಳು. ಗಾಂಧೀ ವಿಚಾರ ಮಾರ್ಗ, ಶಿಕ್ಷಣ ಕ್ರಾಂತಿ, ಅಂಜಲಿಗಾಂಧೀ ನೂರು ವರ್ಷಗಳು-ಸಂಪಾದಿತ ಕೃತಿಗಳು. ಭಾವಗೀತೆ, ಸಾಹಿತ್ಯ ವಿಮರ್ಶೆಯ ಮೂಲತತ್ವಗಳು, ಕುವೆಂಪು ಅವರ ನಾಟಕಗಳು, ಶ್ರೀ ರಾಮಾಯಣದರ್ಶನಂ ಮಹಾಕಾವ್ಯ, ಗಾಂಧೀಜಿ-ಬಸವಣ್ಣ, ವಚನಚಳುವಳಿ, ವೀರಶೈವ ಸಂಸ್ಕೃತಿ, ಕನ್ನಡದಲ್ಲಿ ಕೈವಲ್ಯಸಾಹಿತ್ಯ ತೌಲನಿಕ ಕಾವ್ಯಮೀಮಾಂಸೆ, ವೈಚಾರಿಕ ಕೃತಿಗಳು. ಡಾ॥ ಸ್ವಾಮಿಯವರ ಕೆಲವು ಕೃತಿಗಳು ಇಂಗ್ಲಿಷ್‌ಗೂ ಅನುವಾದಿತವಾಗಿವೆ. 1988ರಲ್ಲಿ "ಶಿವಚಿಂತನ" ವೆಂಬ ಅಭಿನಂದನ ಗ್ರಂಥವನ್ನು ಅವರಿಗೆ ನಾಡು-ನುಡಿಯ ಅಭಿಮಾನಿಗಳು ಅರ್ಪಿಸಿದರು.

ಆಶೀರ್ವಚನ, ಅಭಿನಂದನೆಗಳ ಕೆಲವು ನುಡಿಮುತ್ತುಗಳು ಡಾ॥ ತಿಪ್ಪೇರುದ್ರಸ್ವಾಮಿಯವರನ್ನು ಹೀಗೆ ಅಲಂಕರಿಸಿವೆ, ಉದ್ದಾಮ ವಿದ್ವಾಂಸ, ಪುಣ್ಯಜೀವಿ, ಶರಣಸಾಹಿತ್ಯ ಸಿದ್ಧಾಂತರತ್ನ. ಸಕಾರಣರುದ್ರರು, ಗೃಹಸ್ಥಸ್ವಾಮಿ, ಅನುಭಾವದೀಪ್ತಿ, ನಿಷ್ಠಗಾಂಧೀವಾದಿ, ಸಾತ್ವಿಕಸಾಹಸಿ, ಅಪೂರ್ವವ್ಯಕ್ತಿ, ಕನ್ನಡದ ಧವಳಕೀರ್ತಿ, ಮಗುವಿನ ಮುಗ್ಧತೆ, ಮಹಾಮಾನವತಾವಾದಿ, ಕಾಯಕಜೀವಿ, ಸತ್ಯಾನಂದದ ಬೆಳೆ, ಸಾಹಿತ್ಯ ತಪಸ್ವಿ, ಹೊನ್ನಾಳಿಯ ಚಿನ್ನದಪದಕ, ಜ್ಞಾನಯೋಗಿ.

ಡಾ॥ ಸ್ವಾಮಿಯವರು ಲಿಂಗೈಕ್ಯರಾದ ಸಂದರ್ಭದಲ್ಲಿ ನಾಡಿನ ಗಣ್ಯರು ಶ್ರದ್ಧಾಂಜಲಿಯನ್ನರ್ಪಿಸುತ್ತಾ, ಪರಮ ಪೂಜ್ಯ ಡಾ॥ ಶ್ರೀ ಶ್ರೀ ಶಿವಕುಮಾರಸ್ವಾಮಿಗಳು "ಸಮಾಜದ ಅಮೂಲ್ಯ ಆಸ್ತಿ ಇನ್ನಿಲ್ಲವಾಯಿತು"

ಎಂದರೆ, ತುಂಬ ಅಪರೂಪದ ಸ್ಥಿತ ಪ್ರಜ್ಞ ಅವರು ಎಂದು ಡಾ॥ ಹಾ॥ ಮಾ॥ ನಾಯಕರು ಹೇಳಿದರೆ, ಅತ್ಯಂತ ಒಳ್ಳೆಯ ಮನುಷ್ಯ'ರೆಂದವರು ಚದುರಂಗರಾದರೆ ಕನ್ನಡದಲ್ಲಿ ಘನವಾದ ವಿದ್ವಾಂಸ'ರೆಂದರು ಡಾ॥ ಎಲ್. ಬಸವರಾಜು. ಅವರು ಉಡಿಗೆ ತೊಡಿಗೆ, ನುಡಿ, ನಡೆ ಯಾವರೀತಿಯ ವ್ಯತ್ಯಾಸವೂ ಇಲ್ಲದೆ ಏಕರೀತಿಯಲ್ಲಿ ಬದುಕಿದವ್ಯಕ್ತಿ ಎಂದವರು ಡಾ॥ ಸುಜನಾ. 'ನಮ್ಮಿಬ್ಬರ ಮಾರ್ಗಗಳೂ ಬೇರೆ ಬೇರೆ ಆದರೆ ಅವರು ಪ್ರೀತಿ ವಿಸ್ವಾಸಗಳಿಗೆ ಚ್ಯುತಿ ಬರದ ರೀತಿಯಲ್ಲಿ ನಡೆದುಕೊಳ್ಳುತ್ತಿದ್ದರು ಎಂದಿದ್ದಾರೆ ಅವರ ಸಂಬಂಧಿಯೇ ಆದ ಡಾ॥ ಎಚ್. ಎಂ. ಚೆನ್ನಯ್ಯನವರು ಕನ್ನಡಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಶ್ರೀ ಗೊ.ರು. ಚೆನ್ನಬಸಪ್ಪನವರು ದೈವ ತನಗೆ ಬೇಕೆಂದು ಎತ್ತಿಕೊಂಡ ಫಲವಾಗಿದ್ದಾರೆ' ಎಂದರೆ „ವೈಯಕ್ತಿಕವಾಗಿ ಹಾಗೂ ಸಾಹಿತ್ಯಕವಾಗಿ ಬಹಳ ನಷ್ಟವಾಗಿದೆ". ಎಂದಿದ್ದಾರೆ ಡಾ॥ ಜಿ. ಎಸ್. ಶಿವರುದ್ರಪ್ಪನವರು.

ಡಾ॥ ಸ್ವಾಮಿಯವರು ಸಮರ್ಪಿಸಿದ ಅಭಿನಂದನಾಗ್ರಂಥ "ಶಿವಚಿಂತನ" ದ ಪುಟ 670-7 ರಲ್ಲಿ ಹೀಗೆ ಬರೆಯುತ್ತಾರೆ" ಇದುವರೆಗೆ ನಾನು ಮಾಡಿರುವುದರ ಬಗೆಗೆ ಅತಿಯಾದ ಭ್ರಮೆಯೇನೂ ನನಗಿಲ್ಲ. ನನ್ನ ಪರಿಮಿತ ಶಕ್ತಿಗೆ ಎಷ್ಟು ಸಾಧ್ಯವೊ ಅಷ್ಟನ್ನು ಮಾಡಿದ್ದೇನೆ. ಅಭಿಮಾನಿಗಳು ಅದನ್ನೇ ದೊಡ್ಡದಾಗಿ ಕಂಡಿದ್ದಾರೆ. "ಕರ್ಣಾಟಕ ಸಂಸ್ಕೃತಿ ಸಮೀಕ್ಷೆ" ಮತ್ತು "ತೌಲನಿಕ ಕಾವ್ಯ ಮೀಮಾಂಸೆ" ಗಳಂತಹ ಕೃತಿಗಳಂತೂ ಸರಿ. ಶರಣರನ್ನು ಕುರಿತು ನಾನು ಬರೆದಿರುವ ಕಾದಂಬರಿಗಳು ಸಹ ತಮ್ಮ ಉದ್ದೇಶವನ್ನು ಈಡೇರಿಸಿಕೊಂಡಿರುವ ತೃಪ್ತಿ ನನಗಿದೆ, ಆ ವಿಷಯದಲ್ಲಿ ಆಸಕ್ತಿಯಿರುವ ಜನರನ್ನು, ಜನಸಾಮಾನ್ಯರನ್ನೂ, ಮುಟ್ಟಿ ಅವರ ಮನಸ್ಸನ್ನೂ ಅರಳಿಸಿವೆ. ಅನೇಕರಿಂದ ಬಂದ ಪ್ರತಿ-ಕ್ರಿಯೆಯ ಪತ್ರಗಳನ್ನು ಕಂಡು ಅಚ್ಚರಿಗೊಂಡಿದ್ದೇನೆ. ಇವುಗಳನ್ನು ಬರೆಯುವಾಗ ನಾನು ಪಡೆದ ತೃಪ್ತಿ ಸಾರ್ಥಕಗೊಂಡಂತೆ ಅನಿಸಿದೆ. ಆದರೆ ಇದರ ಜೊತೆಗೆ ಒಂದು ಅತೃಪ್ತಿಯನ್ನೂ ನಾನು ಹೇಳಬೇಕು. ಅದೆಂದರೆ ನಮ್ಮ ಸಾಹಿತ್ಯ ವಲಯದ ಬುದ್ಧಿ ಜೀವಿಗಳೂ, ವಿಮರ್ಶಕರೂ ತೋರಿದ ಪ್ರತಿಕ್ರಿಯೆ. ನನ್ನ ಕಾದಂಬರಿಗಳನ್ನು ಅವರು ನಿರ್ಲಕ್ಷಿಸಿದರು; ಅವಜ್ಞೆಗೊಳಗು ಮಾಡಿದರು. "ಕರ್ತಾರನ ಕಮ್ಮಟ" ದಂತಹ ಬೃಹತ್ ಕಾದಂಬರಿಯನ್ನು ನಮ್ಮ ಸಾಹಿತಿ

ಗಳೂ, ವಿಮರ್ಶಕರೂ ಗಂಭೀರವಾಗಿ ತೆಗೆದುಕೊಳ್ಳಲಿಲ್ಲ [ ಆದರೆ ಶ್ರೀ ಸಿದ್ಧಗಂಗಾ ಪೂಜ್ಯ ಶ್ರೀಗಳು ಅದನ್ನು ಜನಮನಕ್ಕೆ ಮುಟ್ಟಿಸುವ ಕೃಪೆಮಾಡಿದರು. ನನಗದೇ ಸಂತೋಷ ಎಂದು 16-10-94 ರಂದು ಜೆ ಎಸ್. ಎಸ್ ಆಸ್ಪತ್ರೆಯಲ್ಲಿ ಚಿಕಿತ್ಸೆ ಪಡೆಯುತ್ತಿದ್ದಾಗ ಈ ಸಂಪಾದಕನೊಂದಿಗೆ ಹೇಳಿದರು. "ಕರ್ತಾರನ ಕಮ್ಮಟ" ವನ್ನು ಮರುಮುದ್ರಣ ಮಾಡಿಸಿ ಸುಲಭ ಬೆಲೆಗೆ ಶ್ರೀಗಳು ಗ್ರಾಮೀಣ ಬಂಧುಗಳಿಗೂ ಗ್ರಂಥವನ್ನು ಮುಟ್ಟಿಸುವ ಯೋಜನೆಯನ್ನು ಕುರಿತು] ಶರಣರನ್ನು ಕುರಿತದ್ದೇ ಅವುಗಳ ದೊಡ್ಡ ದೋಷವೆಂದು ಅವರು ಭಾವಿಸಿರಬಹುದು. ಆದರೆ ಅದೇ ಒಂದು ಅಪೂರ್ವಯೋಗ ಎಂಬ ತೃಪ್ತಿ ನನಗಿದೆ. ಶರಣರು ಪ್ರತಿ ಪಾದಿಸಿದ ಮತ್ತು ತಮ್ಮ ಬದುಕಿನಲ್ಲಿ ಸಾಧಿಸಿ ತೋರಿಸಿದ ಸಾರ್ವಕಾಲಿಕಮಾನವೀಯ ಮೌಲ್ಯಗಳನ್ನು ಇಂದಿನ ಸಾಮಾಜಿಕ ಪ್ರಜ್ಞೆಯ ಹಿನ್ನೆಲೆಯಲ್ಲಿ ಸಾಹಿತ್ಯಕವಾಗಿ ಪರಿವರ್ತಿಸಿ ಜನಮನವನ್ನು ಮುಟ್ಟುವ ಕಾದಂಬರಿಗಳನ್ನು ನೀಡಿದ ತೃಪ್ತಿ ನನಗಿದೆ. ವಿಮರ್ಶಕರು ಎಷ್ಟು ದೂರದಲ್ಲಿಟ್ಟರೂ ಅವುಗಳಲ್ಲಿ ಸತ್ಯವಿದ್ದರೆ ಅವು ಉಳಿಯುತ್ತವೆಂಬ ಭಾವನೆಯೂ ಇದೆ''

ಡಾ|| ತಿಪ್ಪೆರುದ್ರಸ್ವಾಮಿಯವರು ಧರ್ಮಪತ್ನಿ ಶ್ರೀಮತಿ ಗೌರಮ್ಮ ಹೆಣ್ಣು ಮಕ್ಕಳಾದ ಶ್ರೀಮತಿ ಶೈಲಜಾ ಬಸವರಾಜ್, ಶ್ರೀಮತಿ ನಿರ್ಮಲಾ-ವಿಜಯಕುಮಾರ್ ಹಾಗೂ ಮಗ ಡಾ|| ಹೆಚ್. ಟಿ. ಪ್ರಭುದೇವ ಅವರನ್ನು ಬಿಟ್ಟು ಅಗಲಿದ್ದಾರೆ.

ಇಪ್ಪತ್ತನೆಯ ಶತಮಾನಕಂಡ ಶರಣ ಡಾ|| ಹೆಚ್. ತಿಪ್ಪೆರುದ್ರಸ್ವಾಮಿಯವರ ಆತ್ಮಕ್ಕೆ 'ಸಿದ್ಧಗಂಗಾ' ಭಕ್ತಿ ಪೂರ್ವಕ ಶ್ರದ್ಧಾಂಜಲಿಯನ್ನರ್ಪಿಸುತ್ತದೆ.





## ಜ್ಯೋತಿಯುಬಲದಿಂದ ತಮಂಧದ ಕೇಡ ನೋಡಯ್ಯಾ

ತಮಸೋ ಮಾ ಜ್ಯೋತಿರ್ಗಮಯ ಕತ್ತಲೆಯಿಂದ ಬೆಳಕಿನೆಡೆಗೆ ನಡೆಸು ಎಂದು ಪೂರ್ವಕಾಲದ ಋಷಿಗಳು ಪ್ರಾರ್ಥಿಸಿದ್ದಾರೆ. ಇದರ ಹಿಂದೆ ಮುಂದೆ ಇನ್ನೆರಡು ಸಾಲುಗಳಿವೆ. ಅಸತೋ ಮಾ ಸದ್ಗಮಯ ಅಸತ್ತಿನಿಂದ ಸತ್ತಿನೆಡೆಗೆ ನಡೆಸು ಮತ್ತು ಮೃತ್ಯೋರ್ಮಾಅಮೃತಂಗಮಯ ಮೃತ್ಯುವಿನಿಂದ ಅಮೃತತ್ವದೆಡೆಗೆ ನಡೆಸು ಎಂದು ಶಾಂತಿ ಮಂತ್ರವಾದ ಇದು ಪ್ರಾರ್ಥನಾ ಮಂತ್ರವೂ ಆಗಿದೆ. ಇದರಲ್ಲಿ ಅಸತ್ಯದಿಂದ ಸತ್ಯದೆಡೆಗೆ ನಡೆಸು ಎಂದರೆ ಕತ್ತಲೆಯಿಂದ ಬೆಳಕಿನಡೆಗೆ ನಡೆಸು ಹಾಗೆಯೇ ಮೃತ್ಯುವಿನಿಂದ ಅಮೃತತ್ವದೆಡೆಗೆ ನಡೆಸು ಎಂದು. ಪ್ರಾರ್ಥಿಸಲಾಗಿದೆ. ಇಲ್ಲಿ ಅಸತ್, ತಮಸ್ ಹಾಗೂ ಮೃತ್ಯು ಇವುಗಳಿಂದ ಸತ್ಯ, ಜ್ಯೋತಿ ಹಾಗೂ ಅಮೃತತ್ವದೆಡೆಗೆ ನಡೆಸು ಎಂಬಲ್ಲಿ ಮೂರು ಅಶುಭಗಳು ಮೂರು ಶುಭಗಳು ಹೇಳಿದಂತೆ ಭಾಸವಾಗುತ್ತದೆಯಾದರೂ ಹಾಗಿಲ್ಲ. ಮೂರು ಮೂರು ಬೇರೆ ಬೇರೆಯಾಗಿರದೆ ಒಂದೇ ಅಂಶವನ್ನು ಇನ್ನೆರಡು ಅಂಶಗಳಿಂದ ಸ್ಪಷ್ಟಪಡಿಸಿದೆ. ಅಂದರೆ ಅಸತ್ ಎಂದರೆ ತಮಸ್ಸು; ಅಸತ್, ತಮಸ್ ಎಂದರೆ ಮೃತ್ಯುವಿಲ್ಲದೆ ಬೇರೆಯಿಲ್ಲ. ಹಾಗೆಯೇ ಸತ್, ಸತ್ಯವೆಂಬುದೇ ಜ್ಯೋತಿ ಬೆಳಕು. ಸತ್, ಜ್ಯೋತಿಗಳೇ ಅಮೃತತ್ವ-ಅಮರತ್ವವು. ಹೀಗಾಗಿ ಅಸತ್ತಿನಿಂದ ಸತ್ತಿನೆಡೆಗೆ ನಡೆಸು ಎಂದರೆ ಕತ್ತಲೆಯಿಂದ ಬೆಳಕಿನಡೆಗೆ ನಡೆಸು ಎಂದೇ ಆಗಿದೆ. ಅದೇ ರೀತಿ ಈ ಅಸತ್ ಏನಿದೆ ಅದು ತಮಸ್ ಆಗಿದ್ದು ಅದೇ ಮೃತ್ಯುವಾಗಿದೆ. ಹೀಗಾಗಿ ಅಸತ್ತಿನಿಂದ ದಾಟಿಸು, ತಮಸ್ಸಿನಿಂದ ದಾಟಿಸು ಎಂಬುದರ ಅರ್ಥ ಮೃತ್ಯುವಿನಿಂದ ದಾಟಿಸು ಎಂಬುದೇ ಆಗಿದ್ದು, ಸತ್, ಜ್ಯೋತಿಯತ್ತ ನಡೆಸು ಎಂಬುದರ ಅರ್ಥ ಅಮೃತತ್ವ-ಅಮರತ್ವದೆಡೆಗೆ ನಡೆಸು ಎಂಬುದೇ ಆಗಿದೆ ಮಾನವ ಜನ್ಮದ ಮೂಲೋದ್ದೇಶವಾದ ಅಮೃತತ್ವವನ್ನು ಪ್ರಾಪ್ತಮಾಡಿಕೊಳ್ಳುವುದಾಗಿದೆ. ಅಂದರೆ ಮೃತ್ಯುವಿನಿಂದ ಪಾರಾಗುವುದಾಗಿದೆ. ಈ ಮೃತ್ಯುವಿನಿಂದ ಪಾರಾಗಬೇಕಾದರೆ ತಮಸ್ ನಿಂದ ನಾವು ಪಾರಾಗಬೇಕಾಗಿದೆ. ತಮಸ್ ಎಂದರೆ ಕತ್ತಲೆ, ಅಂಧಕಾರ ಅಂದರೆ ಅಜ್ಞಾನ ಎಲ್ಲಿಯವರೆಗೆ ಇದೆಯೋ ಅಲ್ಲಿಯವರೆಗೆ ನಾವು ಅಸತ್ ಆಗಿಯೇ ಉಳಿಯುತ್ತೇವೆ ಅರ್ಥಾತ್ ಜಡವಾಗಿಯೇ ಇರುತ್ತೇವೆ. ಜಡತೆಯೆಂಬುದು ತಮಸ್. ತಮಸ್ ಎಂದರೆ ಅಜ್ಞಾನ, ಅಜ್ಞಾನದಿಂದಲೇ ಈ ಲೋಕದ ಬಂಧನ. ಅದ್ದರಿಂದ ಮೃತ್ಯುವಿನಿಂದ ಪಾರಾದರೆ ಆಗ ಅಮೃತತ್ವ ಅಮರತ್ವ. ಮೃತ್ಯುವಿನಿಂದ ಪಾರಾಗಬೇಕಾದರೆ ಅಜ್ಞಾನ ನಿವಾರಣೆಯಾಗಬೇಕು. ಅಜ್ಞಾನ ನಿವಾರಣೆಯಾದರೆ ಜ್ಞಾನ ಜ್ಯೋತಿ ಬೆಳಗುತ್ತದೆ. ಜ್ಞಾನ ಜ್ಯೋತಿ ಬೆಳಗಿದರೆ ಅದೇ ಅಮೃತತ್ವ ಪ್ರಾಪ್ತಿ.

ಹೀಗಾಗಿ ತಮಸೋ ಮಾ ಜ್ಯೋತಿರ್ಗಮಯ ಕತ್ತಲೆಯಿಂದ ಬೆಳಕಿನಡೆಗೆ ನಡೆಸು ಎಂಬೀ ನಮ್ಮ ಪೂರ್ವಿಕರು ಪ್ರಾರ್ಥಿಸಿದುದನ್ನು ಪ್ರತಿಯೊಬ್ಬರೂ ಎಂದೆಂದೂ ಮಾಡಬೇಕಾದ ಪ್ರಾರ್ಥನೆಯಾಗಿದೆ. ಮಾನವ ಕತ್ತಲೆಯ ಕೂಸು. ಆತನ ಪಯಣ ಸದಾ ಬೆಳಕಿನೆಡೆಗೆ ಸಾಗಬೇಕಾಗಿದೆ. ತಮಸ್ಸು, ಕತ್ತಲೆ, ಅಂಧಃಕಾರ ವೆಂದರೆ ದ್ವೇಷ ಪೂರಿತವಾದ ಭಾವನೆ; ಇದು ಅಜ್ಞಾನದ ಪ್ರತೀಕ. ಈ ಕತ್ತಲಿನಲ್ಲಿ ವೈರ, ಜಡತೆ, ಅಸೂಯೆ, ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯಾ ದಿಗಳೆಲ್ಲ ಒಂದು ಬಲೆಯ ರೂಪದಲ್ಲಿ ಹೆಣೆಯಲ್ಪಟ್ಟು, ಅದೇ ಉರುಳಾಗಿ ಮಾನವ ಜೀವಿತವನ್ನು ಬಂಧಿಸುತ್ತದೆ. ಇದರಿಂದ ಬಿಡುಗಡೆಯಾಗಲು ಬೇಕಾದುದೇ ಬೆಳಕು, ಜ್ಯೋತಿ, ತೇಜೋರೂಪೀ ಪ್ರಕಾಶ, ಜ್ಞಾನ ಇದರಿಂದ ಮಾನವತೆಯು ಬೆಳಗಿ ಸಕಲ ರನ್ನೂ ಪ್ರೀತಿಸುತ್ತ, ಎಲ್ಲರಿಂದ ಪ್ರೀತಿಯನ್ನು ಗಳಿಸುತ್ತ ಸುಖಿಯಾಗಿರಲು ಅವಕಾಶ ವಾಗುತ್ತದೆ. ಮಾನವ ಜೀವಿತದ ಉದ್ದೇಶವೂ ಇದೆ ಯಾಗಿದೆ. ಹೀಗಾಗಿ ತೇಜೋ ರೂಪವಾದ ಅಗ್ನಿಯ ಆರಾಧನೆ ಭಾರತೀಯತ್ವದ ಉಜ್ಜ್ವಲ ಸಂಕೇತವಾಗಿ ಬೆಳೆದು ಬಂದಿದೆ. ಯಾವ ಶುಭ ಕಾರ್ಯವನ್ನು ಮಾಡಬೇಕಾದರೂ ದೀಪ ಹಚ್ಚಿಡದೆ ಅವರು ಪ್ರಾರಂಭಿಸುವುದಿಲ್ಲ. ತೇಜೋ ರೂಪಿಯಾದ ಆ ಸೂರ್ಯ ಭಗವಾನನು ತನ್ನ ಬುದ್ಧಿ ಶಕ್ತಿಯನ್ನು ಪ್ರಚೋದಿಸಲಿ ಎಂಬುದೇ ಅವರ ಪ್ರಾರ್ಥನೆ. ಏಕೆಂದರೆ "ಅಖಿಲ ದಿವ್ಯಾಮೃತ ನವೀನದ್ಯುತಿ ಬೆಳಗೆ ಭಾನು ಬೆಳಗಲು ಲೋಕ ಚೇಟ್ಟಿಸುವುದು. ನೇಸರಿನ ಆ ಬೆಳಕಿನಲ್ಲಿ ಗೂಗೆಗಳಿಗೆ ಪ್ರವೇಶವಿಲ್ಲ. ಯಾವ ಧೂರ್ತತನ, ನೀಚತನ ಗಳಿಗಲ್ಲಿ ಅವಕಾಶವಿಲ್ಲ. ಹಗಲಿನಲ್ಲಿ ನೇಸರು, ರಾತ್ರಿಯಲ್ಲಿ ದೀಪ ಜ್ಯೋತಿ. ಕತ್ತ- ಲಾವರಿಸುವ ಮುನ್ನ ಮನೆಯಲ್ಲಿ ಬೆಳಗುವ ದೀಪಕ್ಕೆ "ಶುಭಂ ಕರೋತು ಕಲ್ಯಾಣೀ ಆರೋಗ್ಯಂ ಧನ ಸಂಪದಂ। ಮಾಯಾ ಮಮತಾ ವಿನಾಶಾಯ ಸಾಯಂ ಜ್ಯೋತಿರ್ನ ಮೋಸ್ತು ತೇ ॥" ಎಂದೋ, "ದೀಪಜ್ಯೋತಿ ಪರಬ್ರಹ್ಮ ದೀಪಜ್ಯೋತಿ ಜನಾರ್ದನಃ। ದೀಪೋ ಹರತು ಮೇ ಪಾಪಂ ದೀಪಜ್ಯೋತಿರ್ನಮೋಸ್ತು ತೇ॥" ಎಂದು ಪ್ರಾರ್ಥಿಸಿ ನಮನ ಸಲ್ಲಿಸುತ್ತಾರೆ. ನನ್ನ ಪಾಪವೆಲ್ಲವನ್ನು ದೀಪಜ್ಯೋತಿ ಹೋಗಲಾಡಿಸಲಿಯೆಂ- ಬುದರ ಹಿಂದಿರುವ ಅಂತರಾರ್ಥವನ್ನು ಮನಗಾಣಬೇಕು. ದೀಪಜ್ಯೋತಿ ಬೆಳಕು ಎಂದರೇನೇ ಜ್ಞಾನಜ್ಯೋತಿ. ಇದು ಬೆಳಗಿದಾಗಲೇ ನಮ್ಮ ಸರ್ವ ಅಜ್ಞಾನದ ಕತ್ತಲೆಯ ನಿವಾರಣೆ. ಅಜ್ಞಾನವೆಂಬುದು ಪಾಪಕಾರ್ಯಗಳಿಗೆ ಅವಕಾಶ ನೀಡು- ವಂತಹದ್ದು. ಪಾಪಕಾರ್ಯಗಳು ಮಾನವನನ್ನು ಅಂಧಃ ತಮಸ್ಸಿಗೆ ನೂಕುವಂತ- ಹದ್ದು. ಅದರ ಪರಿಣಾಮ ಊಹಿಸಲು ಅಸಾಧ್ಯವಾದದ್ದು; ಘನಘೋರ. ಇದ ರಿಂದ ಉದ್ಧಾರವಾಗಲು ಇರುವ ಏಕೈಕ ಸಾಧನವೆಂದರೆ ಜ್ಯೋತಿಯತ್ತ ಸಾಗುವುದು, ಅದಕ್ಕಾಗಿ ಶ್ರಮಿಸುವುದು. ಜ್ಯೋತಿಯೆಂಬುದು ಪರಮಾತ್ಮಸ್ವರೂಪಿ. ಬೆಳಗಿನೊ ಳಗಣ ಮಹಾಬೆಳಗು ಶಿವಸ್ವರೂಪ. ಪ್ರಜ್ಞಾನಂ ಬ್ರಹ್ಮವೆಂಬುದು ಉಪನಿಷತ್ಕಾ ರರ ಘೋಷಣೆ.



ಲೋಕದಲ್ಲಿ ಅಮೃತತ್ವ ಮರಣಗಳೇ ಮುಖ್ಯ ಇದೇ ಜ್ಞಾನ-ಅಜ್ಞಾನ, ಇದೇ ಬೆಳಕು ಕತ್ತಲೆ. ಒಳಿತಾದುದು, ಇರುವಂತಹದು, ಮಂಗಲಕರವಾದುದು, ಸತ್ಯವಾ ದುದು ಶಾಶ್ವತವಾದುದು ಏನಿದೆಯೋ ಅದೆಲ್ಲ ಬೆಳಕು, ಅದೇ ಸತ್. ಅದೇ ಭಗ ವಂತನ ರೂಪ. ಕೆಡುಕಾದುದು, ಅಮಂಗಲಕರವಾದುದು, ಅಸತ್ಯವಾದದು, ಇಲ್ಲದಿರು ವುದು ಅಶಾಶ್ವತವಾದುದು, ಮಿಥ್ಯೆಯಾದುದು ಏನೇನಿದೆಯೋ ಅದೆಲ್ಲ ಕತ್ತಲೆ. ಅಸತ್-ಕತ್ತಲೆ ಮೃತ್ಯುವಿನ ರೂಪ. ಈ ಕತ್ತಲೆ-ಬೆಳಕಿನ ಆಟದಲ್ಲಿ ಬೆಳಕಿನ ಜಯ ವಾಗಬೇಕಾದುದು ಅವಶ್ಯ. ಬೆಳಕಿನ ಜಯವಾಗದಿದ್ದರೆ ಕತ್ತಲೆಯ ರಾಜ್ಯ ಶಾಶ್ವತ. ಅದೇ ಜಡ ಪ್ರಪಂಚ. ದುಃಖ-ದುಮ್ಮಾನಗಳ, ಅಜ್ಞಾನದ ಕರಾಳ ಛಾಯೆಯಡಿ ಯಲ್ಲಿ ಅಗೋಚರವಾಗಿ ಬಿದ್ದಿದ್ದು ಬವಣೆ ಪಡಬೇಕಾಗುತ್ತದೆ. ಇದರಿಂದ ಮೇಲೆದ್ದು ಬೆಳಕಿನ ರಾಜ್ಯದತ್ತ ಸಾಗಬೇಕು. ಅದೇ ಸತ್ ಪ್ರಪಂಚ. ಆನಂದ ಅಮರತ್ವದ ಬೆಳಕಿನ-ಜ್ಞಾನದ ದಿವ್ಯ ಪ್ರಕಾಶದಲ್ಲಿ ದೇದೀಪ್ಯಮಾನರಾಗಿ ಶಾಶ್ವತಾನಂದವನ್ನು ಅನುಭವಿಸುವುದು. ಅದೇ ಇಲ್ಲಿ ಜನಿಸಿದವರು ಗಳಿಸಬೇಕಾದ ಪದವಿ, ಸೇರಬೇ ಕಾದ ಗುರಿ. ಅದನ್ನು ಸಂಪಾದಿಸುವುದಕ್ಕಾಗಿಯೇ ಪೂರ್ವದ ಆದ್ಯರು ಪ್ರಾರ್ಥಿ ಸಿದ್ದು ತಮಸೋಮಾ ಜ್ಯೋತಿರ್ಗಮಯ ಎಂದು. ಮೃತ್ಯುರೂಪಿಯಾದ ಅಸತ್ ತಮಸ್ಸಿನಿಂದ ಅಮೃತರೂಪಿಯಾದ ಸತ್, ಜ್ಯೋತಿಯತ್ತ ಸಾಗುವುದೇ ಮಾನವ ಜೀವಿತದ ಧ್ಯೇಯವೆಂದು ಮನಗಂಡು, ಆದರತ್ತ ಸಾಗಲು ಕಟೀಬದ್ಧರಾಗಬೇಕಾ ದುದು ನಮ್ಮೆಲ್ಲರ ಆದ್ಯಕರ್ತವ್ಯವೆಂಬುದನ್ನು ಮರೆಯಬಾರದು. "ಜ್ಞಾನದ ಬಲದಿಂದ ಅಜ್ಞಾನದ ಕೇಡ ನೋಡಯ್ಯ, ಜ್ಯೋತಿಯ ಬಲದಿಂದ ತಮಂಧದ ಕೇಡ ನೋಡಯ್ಯ ಸತ್ಯದ ಬಲದಿಂದ ಅಸತ್ಯದ ಕೇಡ ನೋಡಯ್ಯ. ಪರುಷದ ಬಲದಿಂದ ಅವಲೋಹ ಕೇಡ ನೋಡಯ್ಯಾ ಎಂದು ಒಳಗಿನೊಳಗಣ ಮಹಾ ಬೆಳಗ ಕಂಡ" ಬಸವಣ್ಣನ ವರು ಹೇಳಿದುದನ್ನು ಸದಾ ಚಿಂತನ ಮಾಡಿ, ಇದನ್ನು ನಮ್ಮ ನಿತ್ಯ ಪ್ರಾರ್ಥನೆಯ ನ್ನಾಗಿಸಿ ಬೆಳಕಿನತ್ತ ಸಾಗುವುದಕ್ಕೆ ಪಣ ಕಟ್ಟೋಣ.

ಓಂ ಅಸತೋಮಾ ಸದ್ಗಮಯ। ತಮಸೋ ಮಾ ಜೋತಿರ್ಗಮಯ
ಮೃತ್ಯೋರ್ಮಾಅಮೃತಂಗಮಯ।

ಇದೇ ಶಾಂತಿಯನ್ನು ದೊರಕಿಸುವಂತಹದ್ದು. ಓಂ ಶಾಂತಿಃ ಶಾಂತಿಃ ಶಾಂತಿಃ

---

—ಎಂ. ಮಾಧವಪ್ಪ, ಶ್ರೀನಿವಾಸ, ಡಿ.ವಿ. ಎಸ್. ಹೈಸ್ಕೂಲ್ ಮೈದಾನದ ಪಕ್ಕ,
ವಿನೋಬನಗರ, ಶಿವಮೊಗ್ಗ. 577201

# ಕರ್ನಾಟಕದಲ್ಲಿ ಕನ್ನಡವೇ ಪ್ರಧಾನ

ಕರ್ನಾಟಕದಲ್ಲಿ ಕನ್ನಡದ ಹೊರತಾಗಿ ತುಳು, ಕೊಂಕಣಿ, ಉರ್ದು, ಮಲೆಯಾಳಂ, ತಮಿಳು, ತೆಲುಗು, ಮರಾಠಿ ಇನ್ನಿತರ ಮಾತೃಭಾಷೆಗಳ ಕನ್ನಡಿಗರಿದ್ದಾರೆ. ಇವರು ಕರ್ನಾಟಕದ ಜನಸಂಖ್ಯೆಯಲ್ಲಿ ಶೇಕಡಾ ಮೂವತ್ತೈದಾಗಿರುವರು. ಕರ್ನಾಟಕದಲ್ಲಿ ಕನ್ನಡಿಗರಲ್ಲಿಯೇ ಪ್ರಾದೇಶಿಕ ಭಿನ್ನತೆ, ಭಾಷಾಭಿನ್ನತೆ, ಜಾತಿಮತಗಳ ಭಿನ್ನತೆ ಇತ್ಯಾದಿ ಭಿನ್ನತೆಗಳಿವೆ. ವಿವಿಧತೆಯಲ್ಲಿ ಏಕತೆಯನ್ನುಳಿಸಿಕೊಳ್ಳಬೇಕಾದರೆ ಕರ್ನಾಟಕದಲ್ಲಿ ಕನ್ನಡ ಏಕೈಕ ಪ್ರಭುತ್ವದ ಭಾಷೆಯಾಗಬೇಕು. ಕರ್ನಾಟಕದಲ್ಲಿರುವ ಪ್ರತಿಯೊಂದು ಭಾಷೆಗೂ ಗೌರವ ಸ್ಥಾನವಿರಬೇಕು, ಕೊಡಬೇಕು. ಆದರೆ ಕನ್ನಡದ ಸಾರ್ವಭೌಮತ್ವವನ್ನು ಕಡೆಗಣಿಸುವಂತೆ ಅಲ್ಲ. ಮಹಾರಾಷ್ಟ್ರದಲ್ಲಿ ಮರಾಠಿ, ಕೇರಳದಲ್ಲಿ ಮಲೆಯಾಳಮ್, ತಮಿಳುನಾಡಿನಲ್ಲಿ ತಮಿಳು, ಆಂಧ್ರದಲ್ಲಿ ತೆಲಗು ಇದ್ದ ಹಾಗೆ ಕರ್ನಾಟಕದಲ್ಲಿ ಕನ್ನಡವೇ ಪ್ರಧಾನ ಭಾಷೆ. ಕನ್ನಡ ಭಾಷಿಕರೇ ಕನ್ನಡ ಬೇಡವೆನ್ನುವ ನೀತಿಯಲ್ಲಿ ನಡೆದರೆ ಕನ್ನಡ ಯಾರಿಗೆ ಬೇಕು. ಕರ್ನಾಟಕದ ಎಲ್ಲಾ ಜನರು ಕನ್ನಡವನ್ನು ಆದರಾಭಿಮಾನದಿಂದ ವರ್ತಿಸುವಂತೆ ಸರಕಾರ ಆಡಳಿತ ನೀತಿಯನ್ನು ಅನುಷ್ಠಾನಕ್ಕೆ ತರಬೇಕು. ನೆರೆಹೊರೆಯ ರಾಜ್ಯಗಳಲ್ಲಿ ಅಲ್ಪಸಂಖ್ಯಾತರು ಅಲ್ಲಿಯ ಬಹು ಸಂಖ್ಯಾತರ ಅರ್ಥಾತ್ ರಾಜ್ಯಭಾಷೆಯನ್ನು ಸ್ವೀಕರಿಸಿ ಮುನ್ನಡೆಯುತ್ತಿರುವಾಗ ಕರ್ನಾಟಕದಲ್ಲಿ ಅಲ್ಪ ಸಂಖ್ಯಾತರೇಕೆ ಕನ್ನಡವನ್ನು ದೂರವಿಡಲು ಪ್ರಯತ್ನಿಸುತ್ತಾರೆಂಬುದನ್ನು ತಿಳಿದು ಸಮರ್ಪಕ ಹೆಜ್ಜೆಯನ್ನಿಡಬೇಕಾಗಿದೆ. ರಾಜಕೀಯ ಸಮಸ್ಯೆಗಳೇ ಕಾರಣ ಆಗಿದ್ದರೆ ಇತರ ರಾಜ್ಯಗಳಲ್ಲಿ ಏಕೆ ಈ ಸಮಸ್ಯೆಯಿಲ್ಲ ? ಕರ್ನಾಟಕ ರಾಜಕಾರಣಿಗಳಲ್ಲಿ ಕನ್ನಡಪ್ರೇಮ, ಅಭಿಮಾನದ ಕೊರತೆಯೆ ? ಭಿನ್ನತೆಯೆ? ಭಿನ್ನತೆಗಳು ಭಿನ್ನಾಭಿಪ್ರಾಯಗಳೇನೆ ಇರಲಿ, ಕರ್ನಾಟಕದಲ್ಲಿ ಕನ್ನಡ ಪ್ರಪ್ರಥಮ ಭಾಷೆಯೆಂಬ ಬಗ್ಗೆ ಏಕಮತವಿರಬೇಕು.

ವ್ಯಾಪಾರೀ ಮನೋಪ್ರವೃತ್ತಿ, ವಸ್ತುನಿಷ್ಠ ಜೀವನ ತತ್ವಗಳ ನಿರಭಿಮಾನಿ ಕನ್ನಡಿಗರಲ್ಲಿ ಭಾಷಾಭಿಮಾನ ಮೂಡುವಂತೆ ಮಾಡಬೇಕಾದರೆ ರಾಜ್ಯಾಡಳಿತೆಯ ಪ್ರತಿಯೊಂದು ಕ್ಷೇತ್ರದಲ್ಲೂ ಕನ್ನಡವನ್ನು ಜಾರಿಗೊಳಿಸಿ, ಕನ್ನಡ ಭಾಷೆಯ ಮಹತ್ವವನ್ನು ಜನತೆಗೆ ತಿಳಿಸಬೇಕು. ಮುಂಬಯಿ ನಗರದಲ್ಲಿ ಮರಾಠೇತರ ಇಂಗ್ಲಿಷ್ ಮತ್ತಿತರ ಮಾಧ್ಯಮಿಕ ಶಾಲೆಗಳಲ್ಲಿ ಮರಾಠಿಯನ್ನು ಕಡ್ಡಾಯವಾಗಿ ಕಲಿಸುತ್ತಾರೆ, ಕಲಿಯುತ್ತಾರೆ. ಯಾಕೆಂದರೆ ಆ ಭಾಷೆಯ ಅನಿವಾರ್ಯತೆಯ ಅರಿವು ಎಲ್ಲರಿಗಿದೆ, ಮರಾಠಿಯನ್ನು ಕಲಿಯದಿದ್ದರೆ, ಕಲಿಸದಿದ್ದರೆ ಮುಂದೆ ತೊಂದರೆ ಬಂದೀತೆಂಬ ಭೀತಿ



ಯಿದೆ. ಕೆಲವೊಂದನ್ನು ನೇರ ಕಾನೂನು ಕಾಯಿದೆಗಳಿಂದ ಜಾರಿಗೆ ತರದಿದ್ದರೂ ಅವಶ್ಯಕತೆಯ ಅರಿವನ್ನುಂಟುಮಾಡಿಕೊಟ್ಟರೆ ಸಾಕು, ಮುಂದೆಲ್ಲ ವ್ಯವಸ್ಥಿತವಾಗಿ ಸಾಗುತ್ತದೆ. ಈ ನಿಟ್ಟಿನಲ್ಲಿ ಕರ್ನಾಟಕದ ನೆರೆಹೊರೆಯ ಬಹುಚಾಣಾಕ್ಷ ರೀತಿಯಿಂದ ಚಾಣಕ್ಯ ನೀತಿಯಂತೆ ವರ್ತಿಸುವುದು ಗಮನೀಯ. ಜನರು, ಆಧುನಿಕ ಕಾಲಮಾನದಲ್ಲಿ, ಬದಲುತ್ತಿರುವ ಪರಿಸ್ಥಿತಿಗನುಸಾರವಾಗಿ ಅನಿವಾರ್ಯವೆನಿಸಿದ್ದನ್ನು ತಮ್ಮದನ್ನಾಗಿಸಿಕೊಳ್ಳುತ್ತಾರೆಂಬುದು ವ್ಯವಹಾರಿಕ ಸತ್ಯವಾಗಿದೆ. ರಾಜ್ಯದ ಶಾಸನ ಭಾಷೆ ಅಥವಾ ಸಂಪರ್ಕ ಭಾಷೆಯು ಅನಿವಾರ್ಯವೆನಿಸಿದಾಗ ಜನರು ಸ್ವೀಕರಿಸುತ್ತಾರೆಂಬ ಮಾತು ಹೆಚ್ಚಿನಂಶ ಜನರಿಗೆ ಅನ್ವಯಿಸುವುದಿಲ್ಲ.

ಕರ್ನಾಟಕದಲ್ಲಿ ಭಾಷಾ ಸಮಸ್ಯೆ ತಲೆದೂರಿದಾಗಲೆಲ್ಲ ವಿಶಾಲ ದೃಷ್ಟಿಕೋನ ಹೃದಯ ವೈಶಾಲ್ಯ, ಮಾನವೀಯ ಮೌಲ್ಯ, ರಾಷ್ಟ್ರ ಭಾಷೆ, ಅಂತರಾಷ್ಟ್ರೀಯ ಭಾಷೆ, ವೈದ್ಯಕೀಯ ತಾಂತ್ರಿಕ ಶಿಕ್ಷಣ, ಕನ್ನಡೇತರ ಪ್ರದೇಶಗಳಲ್ಲಿ ಕೆಲಸ ಸೌಲಭ್ಯ ಮುಂತಾದ ನೂರಾರು ಕುಂಟು ನೆಪಗಳನ್ನೊಡ್ಡಿ ಕನ್ನಡ ಪರವಲ್ಲದ ತರ್ಕ ಮಂಡಿಸುವವರಿದ್ದಾರೆ. ಈ ಎಲ್ಲಾ ತರ್ಕಗಳನ್ನು ನೇರವಾಗಿ ತಳ್ಳಿಹಾಕುವುದು ಸಮಂಜಸವಲ್ಲ ಎನ್ನೋಣವೆ ? ಹಾಗಾದರೆ ಇದೇ ಸಮಸ್ಯೆ ನೆರೆಹೊರೆ ರಾಜ್ಯಭಾಷೆಗಳಿಗೆ ಭಾಷಿಕರಿಗೆ ಅನ್ವಯಿಸಬೇಕಲ್ಲವೇ ? ಮಹಾರಾಷ್ಟ್ರದ ಕನ್ನಡಿಗರು ಮರಾಠಿಯನ್ನು ಕಲಿಯಲಿ. ಕರ್ನಾಟಕದ ಮರಾಠಿಗರು ಕನ್ನಡ ಕಲಿಯಲಿ, ಇದೇ ತತ್ವ ಆಂಧ್ರ, ಕೇರಳ, ತಮಿಳುನಾಡಿಗೂ ಅನ್ವಯಿಸಲಿ. ಇದರಿಂದಾಗಿ ನೆರೆಹೊರೆಯ ರಾಜ್ಯಗಳಲ್ಲಿ ಬಾಂಧವ್ಯ ಸೇತುವೆಯುಂಟಾಗಿ ಪರಸ್ಪರ ಕೊಂಡುಕೊಳ್ಳುವ ಒಪ್ಪಿಯುಪ್ಪಿಕೊಳ್ಳುವ ತತ್ವ ಇನ್ನಷ್ಟು ಭದ್ರತಳಹದಿಯಲ್ಲಿ ಬಲವಾಗುವುದಕ್ಕೆ ಹೆಚ್ಚಿನ ಪುಷ್ಟಿಯನ್ನಿತ್ತಂತಾಗುತ್ತದೆ. ಆಗ ಪರಸ್ಪರ ಭಾಷಾಬಾಂಧವ್ಯಕ್ಕೆ ವಿಶೇಷ ಬಲ ಬರುತ್ತದೆ. ಬೆಲೆ ಬರುತ್ತದೆ ದೇಶದೇಕತೆಗೆ ಸಹಾಯಕವಾಗುತ್ತದೆ. ಜಗಳಕಾರಕ ಸಮಸ್ಯೆಗಳನ್ನು ನಿವಾರಿಸುವಲ್ಲಿ ಕೊಳಕು ರಾಜಕಾರಣಕ್ಕೆ ಪೋಷಕವಾಗದಂತೆ ನೋಡಿಕೊಳ್ಳುವಲ್ಲಿ ಸಹಬಾಳ್ವೆಗೆ ಭದ್ರಬುನಾದಿ ಹಾಕಲು ಸಾಧ್ಯವಾಗುತ್ತದೆ. ಕರ್ನಾಟಕವು ಕನಿಷ್ಠ ನೆರೆಹೊರೆಯವರಂತೆ ತಾನೆಂಬ ಭಾಷಾ ನೀತಿಯನ್ನು ಆಡಳಿತೆಯಲ್ಲಿ ತರುವಲ್ಲಿ ವ್ಯವಹಾರ ಕುಶಲತೆಯೊಡನೆ ಕಾರ್ಯನಿರ್ವಹಿಸಬೇಕು.

( ಸೌಜನ್ಯ: ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ-583211)

---

—ಡಾ॥ ಸಂಜೀವಶೆಟ್ಟಿ, ಮುಖ್ಯಸ್ಥರು, ಕನ್ನಡ ವಿಭಾಗ, ಕೆ. ಜೆ. ಸೋಮಯ್ಯ ಕಲಾ ಮತ್ತು ವಾಣಿಜ್ಯ ಕಾಲೇಜು, ವಿದ್ಯಾವಿಹಾರ(ಪೂರ್ವ) ಮುಂಬಯಿ-400077

## ಸರ್ವಾಂತರ್ಯಾಮಿ

**ಸಿಕ್ ಪಂಥದ ಗುರುಗಳಾದ ಗುರುನಾನಕ್‌ರು** ತಮ್ಮ 'ವಿಶ್ವಮಾನವ ಪ್ರೇಮ' ಸಿದ್ಧಾಂತವನ್ನು ಪ್ರಚಾರಮಾಡುತ್ತಾ ಅಫ್ಘಾನಿಸ್ಥಾನ, ಮಕ್ಕ, ಮದೀನ ಇತ್ಯಾದಿವಿದೇಶಗಳ ಪರ್ಯಟನೆ ಮಾಡುತ್ತಿದ್ದರು. ಗುರುನಾನಕ್‌ರು ಅಲೆದು ಅಲೆದು ಸುಸ್ತಾಗಿ, ಮಕ್ಕ ನಗರದಲ್ಲಿ ಒಂದು ಕಡೆ ಮರದ ತಂಗಿನಲ್ಲಿ ವಿಶ್ರಾಂತಿಗಾಗಿ ಕುಳಿತರು. ಧಣಿದಿದ್ದ ನಾನಕ್‌ರಿಗೆ ಆ ಹಿತಕರವಾದ ವಾತಾವರಣ ಎಷ್ಟೋ ಸಂತೋಷವನ್ನು ನೀಡಿತ್ತು. ಕಾಲುಚಾಚಿಕೊಂಡು ಹಾಗೇ ಗಾಢನಿದ್ರೆಯೊಳಕ್ಕೆ ಜಾರಿದರು.

ಎಷ್ಟೋ ಹೊತ್ತಿನ ಬಳಿಕ ತಮ್ಮ ಸುತ್ತಮುತ್ತಲೂ ಕೆಲವರು ಗಟ್ಟಿಯಾಗಿ ಮಾತಾಡುತ್ತಿರುವುದನ್ನು ಕೇಳಿ ನಾನಕ್‌ರು ದಿಗ್ಭ್ರಾಂತರಾಗಿ ಎದ್ದರು. ಸುತ್ತಲೂ ಕೆಲವು ಮೊಹಮದೀಯರು ನಿಂತು ಗುಸು-ಗುಸು ಅಂತ ಏನೇನೋ ಮಾತಾಡಿಕೊಳ್ಳುತಿದ್ದರು. ಅವರಲ್ಲಿ ಒಬ್ಬ ಮೊಹಮದೀಯ ಮುಂದೆ ಬಂದು–"ನೀನು ಯಾರು? ಪವಿತ್ರವಾದ ಮಕ್ಕ ಮಸೀದಿ ಇರುವ ಕಡೆಗೆ ಕಾಲು ಚಾಚಿ ಮಲಗಿದ್ದೀಯ! ನಿನಗೆಷ್ಟು ಸೊಕ್ಕು? ನೀನು ಇಸ್ಲಾಂನ ಅಲ್ಲಾನನ್ನು ಅವಮಾನ ಮಾಡಬೇಕೆಂದಿದ್ದೀಯೋ!?" ಎಂದು ಗಡುಸಾಗಿ ರೇಗಿದ.

ಆದಕ್ಕೆ ಗುರುನಾನಕ್‌ರು ಕೋಪಿಸಿಕೊಳ್ಳಲಿಲ್ಲ, ಶಾಂತರಾಗಿ "ನಿಮ್ಮಲ್ಲಿ ಯಾರಾದರೂ ಸರಿಯೇ, ನನ್ನ ಕಾಲುಗಳನ್ನು ಎತ್ತಿ ಮಸೀದಿ ಇಲ್ಲದ ಕಡೆಗೆ ಇಡುವಿರಾ.......?" ಎಂದು ವಿನಂತಿಸಿಕೊಂಡರು.

ಆ ಯುವಕ ಬಂದು ಗುರುನಾನಕ್‌ರ ಕಾಲುಗಳನ್ನು ಎತ್ತಿ ಮಸೀದಿ ಇಲ್ಲದ ಕಡೆಗೆ ಇಡಲು ಪ್ರಾರಂಭಿಸಿದ. ತಕ್ಷಣವೇ ಎಲ್ಲರಿಗೂ ಆಶ್ಚರ್ಯವಾಗುವ ರೀತಿಯಲ್ಲಿ ಕಾಲು ಇಟ್ಟ ಇಟ್ಟ ಕಡೆಗೆ ಮಸೀದಿಯೂ ತಿರುಗಲು ಪ್ರಾರಂಭಿಸಿತಂತೆ!

ಧರ್ಮಗಳು ಬೇರೆ ಬೇರೆಯಾದರೂ ತತ್ವಗಳು ಒಂದೇ!
ಸರ್ವ ಧರ್ಮಗಳ ಸಾರವೆಲ್ಲಾ ಒಂದೇ!
ಭಗವಂತನು ಸರ್ವಾಂತರ್ಯಾಮಿ ಎಂದೇ! ●

–ಜಿ.ವಿ. ಪ್ರಭು, ನಂ. 3305, 4ನೇ ಕ್ರಾಸ್ ಗಾಯಿತ್ರಿನಗರ, ಬೆಂಗಳೂರು-560021.



## ಗುರಿ ಒಂದು ಚಿಂತನೆ

"ಏಳಿ, ಎಚ್ಚರಗೊಳ್ಳಿ, ಗುರಿ ಮುಟ್ಟುವವರೆಗೆ ನಿಲ್ಲದಿರಿ" ಎಂಬುದು ಸ್ವಾಮಿ ವಿವೇಕಾನಂದರು ಭಾರತದ ಯುವಜನತೆಗೆ ನೀಡಿದ ಕರೆ, ವಿವೇಕಾನಂದರು ಭಾರತವನ್ನು ಚೈತನ್ಯಮಯಗೊಳಿಸುವ ಗುರಿಯನ್ನು ಮುಟ್ಟಲು ಯುವಜನಾಂಗಕ್ಕೆ ಈ ರೀತಿ ಆದೇಶಿಸಿದರು, ಆದರೆ ಯುವಜನಾಂಗವು ಅಂತಹ ಗುರಿಯನ್ನು ಮುಟ್ಟಲು ಪ್ರಯತ್ನಿಸಿತೋ ಇಲ್ಲವೋ ಎಂಬುದನ್ನು ಯಾರು ಅರಿಯಲೆಕ್ಕಿಸಿರುವರೋ ತಿಳಿಯದು, ಅಲ್ಲದೆ, ಜನನಾಯಕರು ದೇಶವು ತನ್ನ ಗುರಿಯತ್ತ ಸಾಗಲು ನೆರವಾಗಬೇಕೆಂದು ಜನತೆಗೆ ಆಗಾಗ್ಗೆ ಕರೆಕೊಡುತ್ತಲೇ ಇರುತ್ತಾರೆ. ಇವರೆಲ್ಲರೂ ಹೇಳುತ್ತಿರುವ ಆ 'ಗುರಿ' ಯಾವುದು? ಯಾವ ಸ್ವರೂಪದ್ದು?- ಎಂಬುದನ್ನು ಇನ್ನೂ ಅರಿಯಬೇಕಿದೆ.

ಪ್ರತಿಯೊಬ್ಬರ ಬದುಕಿಗೂ ಗುರಿಯೊಂದಿದೆಯೆಂಬುದು ಜ್ಞಾನಿಗಳ ಅಭಿಮತ, ಅದನ್ನು ಈಡೇರಿಸಲೋಸುಗವೇ ಜೀವಿಯು ಅಸ್ತಿತ್ವಕ್ಕೆ ಬರುತ್ತದೆಯೆಂಬುದು ಅವರ ಹೇಳಿಕೆ, ವ್ಯಕ್ತಿಯು ಮಗುವಿದ್ದಾಗಿನಿಂದಲೇ ಬದುಕಿನ ಗುರಿ ನಿರ್ಧರಿಸಿಕೊಳ್ಳುವಂತ ಹಿರಿಯರೂ ಒತ್ತಾಯ ಹೇರುವುದುಂಟು, ಬಹುಮಟ್ಟಿಗೆ, ವ್ಯಕ್ತಿಯೋರ್ವನು ತನ್ನ ಜೀವಿತ ಕಾಲದಲ್ಲಿ ಸಾಧಿಸುವ ಉತ್ತಮ ವಿದ್ಯೆ, ಉದ್ಯೋಗ ಆಸ್ತಿ-ಪಾಸ್ತಿಗಳಿಕೆ, ಇತ್ಯಾದಿ ಪ್ರಾಪಂಚಿಕ ಸಾಧನೆಗಳೇ ಈ ಗುರಿಯೆಂಬ ಮಾತಿನ ಅರ್ಥವಿರಬೇಕೆಂದು ಕೆಲವೊಮ್ಮೆ ಭಾಸವಾಗುತ್ತದೆ, ಸದ್ಯದ ಪರಿಸ್ಥಿತಿಯಲ್ಲಿಯೆ "ಗುರಿ" ಎಂಬುದಕ್ಕೆ ಅರ್ಥವಿಲ್ಲದೆ ಬೇರೆ ಅರ್ಥವಿರುವಂತೆ ಕಂಡುಬರುವುದಿಲ್ಲ.

ಗುರಿಯಲ್ಲಿ ನೇರವಾದುದೂ ಉಂಟು, ಮಾನವನು ನೇರ ಗುರಿಯಲ್ಲಿ ಸಾಗಬೇಕೆಂಬುದೇ ವಿವೇಕಿಗಳ ಹಿತವಾದ, ಅಲ್ಲದೆ, ನಿರ್ದಿಷ್ಟವಾದ ಒಂದೇ ಗುರಿ ಇರಬೇಕಾದುದನ್ನೂ ಒತ್ತಿ ಹೇಳಲಾಗುತ್ತೆ. ನಿರುಪಾಧಿಕ ಜೀವನ ನಡೆಸುವಲ್ಲಿ ಇಂತಹ ನೇರ ಮಾರ್ಗವು ನೆರವಾಗುತ್ತದೆನ್ನುವುದು ಇದರ ಹಿಂದಿರುವ ಆಶಯ, ಹಾಗೆಯೇ, ಉದ್ದೇಶಿಸಿದುದನ್ನು ಕ್ರಮವಾಗಿಮಾಡಿ ಪೂರೈಸಲು ಇದರಿಂದ ಸಾಧ್ಯವಾಗಬಹುದು. ಆದರೆ ನಿಶ್ಚಿತಗುರಿಯನ್ನು ನಿರ್ಧರಿಸುವ ಪರಿ ಎಲ್ಲದರಲ್ಲ; ಎಲ್ಲರಿಗೂ ಅದು ಸಾಧ್ಯವಿಲ್ಲ. ನಿರ್ದಿಷ್ಟ ಗುರಿಯನ್ನು ಸಾಧಿಸುವುದು ಒಂದು ವಿಧದ ತಪಸ್ಸು ಎನ್ನುವುದುಂಟು, ಜ್ಞಾನಿಗಳಿಗೂ ಯೋಗಿಗಳಿಗೂ ಇದು ಸಹಜವೆನಿಸಬಹುದು. ಸಾಮಾನ್ಯರ ಗುರಿಗಿಂತ ಭಿನ್ನವಾದ ಈ ಮಾರ್ಗವು ಆಧ್ಯಾತ್ಮಿಕ ಸಾಧನೆಯು, ಅಂದರೆ 'ಮೋಕ್ಷಸಾಧನೆಯು' ಹಿನ್ನೆಲೆಯಲ್ಲಿ ರೂಪುಗೊಂಡಂತೆ ತೋರುತ್ತದೆ.

ಇಂಗ್ಲಿಷ್‌ನಲ್ಲಿ 'Low Aim is Crime' ಎಂಬ ಮಾತಿದೆ. ಅತಿ ಉನ್ನತ ಧ್ಯೇಯ, ಆದರ್ಶ, ಉದ್ದೇಶಗಳನ್ನು ಹೊಂದಬೇಕೆಂಬುದರ ಹಿನ್ನೆಲೆಯಲ್ಲಿ ಈಮಾತು ಹುಟ್ಟಿದೆಯೆನ್ನಬಹುದು. ಆದರೆ ಪ್ರಜ್ಞಾವಂತರಿಗೆ, ಮಹಾತ್ಮರಿಗೆ ಸಾಧ್ಯವಾದುದು

ಇತರರಿಗೂ ಆಗಬೇಕೆಂದು ನಿರೀಕ್ಷಿಸುವುದು ಸುಲಭವಲ್ಲ. ಅರಿವಿನ ಬಲವಿಲ್ಲದೆ ಮಾರ್ಗದರ್ಶನದ ನೆರವಿಲ್ಲದೆ ಗುರಿಯನ್ನು ಗುರುತಿಸಬಹುದು ಖಂಡಿತ ಸಂಭವನೀಯವಲ್ಲ ಇಷ್ಟಿದ್ದರೂ ಈ ಲೋಕದ ಸಮಸ್ತ ಜೀವಿಗಳ ಬದುಕಿಗೂ ನಿರ್ದಿಷ್ಟ ಗುರಿಯಿರುವುದು ಮತ್ತು ಅಂತಹಸಾಧನೆಗೆ ಅವುಗಳ ಯಥಾಶಕ್ತಿ ಶ್ರಮಿಸುತ್ತಿರುವುದು ಸೂಕ್ಷ್ಮವಾಗಿ ಗಮನಿಸಿದರೆ ಅರ್ಥವಾಗುತ್ತದೆ. ಮನುಷ್ಯ ಜೀವಿಯು ತನ್ನ ಗುರಿಯ ಸಾಧನೆಗೆ ಪ್ರಜ್ಞಾಪೂರ್ವಕ ಪ್ರಯತ್ನ ನಡೆಸುತ್ತಿರುವುದನ್ನು ಕಾಣಬಹುದು.

ಗುರಿಯೆಂಬುದು ಆದರ್ಶದ ಇನ್ನೊಂದು ಮುಖ, ವ್ಯಕ್ತಿ ಆದರ್ಶದಂತೆಯೇ ರಾಷ್ಟ್ರೀಯ ಆದರ್ಶವೂ ಇದೆಯೆಂಬುದು ಗಮನಾರ್ಹ. ದೇಶ, ಜನಾಂಗ, ಕಾಲ, ಪರಿಸರಗಳಿಗನುಗುಣವಾಗಿ ಈ ರಾಷ್ಟ್ರೀಯ ಆದರ್ಶವು ಬದಲಾಗುವುದನ್ನು ಗಮನಿಸಬಹುದು. ಕೆಲವೊಮ್ಮೆ ವ್ಯಷ್ಟಿ ಮತ್ತು ಸಮಷ್ಟಿಯ ನಡುವೆ ಸಾಮರಸ್ಯವೇರ್ಪಡದೆ ಇಡೀ ದೇಶವೇ ಹುಚ್ಚುಹೊಳೆಯಂತೆ ದಾರಿತಪ್ಪಿ ನಡೆಯುತ್ತಿರುವ ಉದಾಹರಣೆಗಳೂ ಎದುರಿನಲ್ಲಿವೆ, ಐಹಿಕ ಸುಖಭೋಗಗಳ ಈಡೇರಿಕೆಗಾಗಿ ಪ್ರಯತ್ನಿಸುತ್ತಿರುವ ದೇಶಗಳು ಇನ್ನೊಂದೆಡೆ, ಯುದ್ಧೋತ್ಸಾಹದಿಂದ ಕೂಡಿದ ಜನಾಂಗವೊಂದು ವಿನಾಕಾರಣ ತನ್ನೊಡನೆ ಇತರ ರಾಷ್ಟ್ರೀಯರೂ ಯುದ್ಧದ ಬಿಸಿಯಿಂದ ನರಳುವಂತೆ, ಸಾವು-ನೋವುಗಳನ್ನು ಅನುಭವಿಸುವಂತೆ ಮಾಡಬಲ್ಲದು, ಸೇಡು, ಪೊಳ್ಳುಪ್ರತಿಷ್ಠೆ, ಭಿನ್ನಾಭಿಪ್ರಾಯ, ವಿರೋಧ, ಸಂಕುಚಿತ ಸ್ವಭಾವ, ಆರ್ಥಿಕ ದುಸ್ಥಿತಿ, ಬೌದ್ಧಿಕ ದಿವಾಳಿತನ, ಇತ್ಯಾದಿಗಳಿಂದ ನರಳುವ ದೇಶವೊಂದು ತನ್ನ ದೇಶಿಯರಲ್ಲೆ ಅಂತಃಕಲಹ ಏರ್ಪಡಿಸಿ ತನ್ನ ಆಡಳಿತಾತ್ಮಕ ದೌರ್ಬಲ್ಯವನ್ನು ಮುಚ್ಚಿಕೊಳ್ಳಲು ಪ್ರಯತ್ನಿಸುವುದುಂಟು.

ಇವುಗಳಿಂದ ವ್ಯಕ್ತಪಡುವ ಅಂಶವೆಂದರೆ, ವ್ಯಕ್ತಿಯಾಗಲೀ ರಾಷ್ಟ್ರವಾಗಲೀ ಉನ್ನತ ಗುರಿಯನ್ನು ಹೊಂದಿರದಿದ್ದರೆ, ಅಂತಹ ಗುರಿಯು ತ್ಯಾಗ, ಸೇವೆ, ಉದಾರತೆ, ಜಾತ್ಯಾತೀತತೆ, ಸಹಿಷ್ಣುತೆ-ಇಂತಹ ಕೆಲವು ಮೂಲಭೂತ ಗುಣಗಳಿಂದ ಕೂಡಿರದಿದ್ದರೆ ತಮ್ಮೊಡನೆ ಇತರರನ್ನು ಗುರಿ ತಪ್ಪಿಸುವ, ನಾಶಗೈಯುವ ಸಾಧ್ಯತೆಯೇ ಹೆಚ್ಚು ದೆಂಬುದನ್ನು ಪ್ರತ್ಯೇಕವಾಗಿ ಹೇಳಬೇಕಿಲ್ಲ, ವಾಸ್ತವದಲ್ಲಿ, ವ್ಯಕ್ತಿ ಆದರ್ಶಗಳ ಮೊತ್ತವೇ ರಾಷ್ಟ್ರೀಯ ಆದರ್ಶ, ಈ ದೃಷ್ಟಿಯಿಂದ, ವ್ಯಕ್ತಿಯ ಸರ್ವತೋಮುಖ ಬೆಳವಣಿಗೆಗೆ, ರಾಷ್ಟ್ರನಿರ್ಮಾಣದಂತಹ ಮಹತ್ಕಾರ್ಯದಲ್ಲಿ ವ್ಯಕ್ತಿಯ ಪಾತ್ರವೂ ಗಮನಾರ್ಹವಾದು ವಿಕಾಸಕ್ಕೆ ತನ್ನ ವಾತಾವರಣವನ್ನು ಸೃಷ್ಟಿಸಬೇಕಾದುದು ಅನಿವಾರ್ಯ, ವಿಶ್ವಕಲ್ಯಾಣದ ಗುರಿ ಹೊಂದಿರುವ ಇಂತಹ ಕೆಲವು ವ್ಯಕ್ತಿಗಳಾದರೂ ಈ ಲೋಕದ ಬದುಕನ್ನು ಸುಧಾರಿಸುವ ಹಾಗೂ ಸಹ್ಯವಾಗಿಸುವ ದಿಸೆಯಲ್ಲಿ ನೆರವುನೀಡಿಯಾರೆಂದು ನಿರೀಕ್ಷಿಸೋಣ

ಲಕ್ಷ್ಮಣ್ ತೆಲಗಾವಿ ರೀಡರ್, ಚರಿತ್ರೆ ವಿಭಾಗ ಕನ್ನಡ ವಿಶ್ವವಿದ್ಯಾಲಯ, ಹಂಪಿ ವಿದ್ಯಾರಣ್ಯ ಕಮಲಾಪುರ-583 221.



# ಮಾತೃಭಾಷೆ; ಶಿಕ್ಷಣ ಮಾಧ್ಯಮ

ಶಿಕ್ಷಣ ಕ್ಷೇತ್ರಕ್ಕೆ ಸಂಬಂಧಿಸಿದಂತೆ ಇರುವ ಹಲವಾರು ಸಮಸ್ಯೆಗಳಲ್ಲಿ ಶಿಕ್ಷಣ ಮಾಧ್ಯಮದ ಸಮಸ್ಯೆ ಅತ್ಯಂತ ಮಹತ್ವವಾದುದು ಹಾಗೂ ಸಂಕೀರ್ಣವಾದುದು. ಯಾವುದೇ ಕಲಿಕೆಗೆ ಒಂದಲ್ಲ ಒಂದು ನೆಲೆಯಲ್ಲಿ ಭಾಷೆಯ ಬಳಕೆ ಆಗಿಯೇ ಆಗುತ್ತದೆ. ಹೀಗೆ ಬಳಕೆಯಾಗುವ ಭಾಷೆ ಯಾವುದಾಗಿರಬೇಕು ಎಂಬ ಪ್ರಶ್ನೆ ಬಂದಾಗ ಶಿಕ್ಷಣ ತಜ್ಞರು ಯಾವುದೇ ಅನುಮಾನವಿಲ್ಲದೆ ಒಂದೇ ಉತ್ತರವನ್ನು ಹೇಳುತ್ತಾರೆ; ಆ ಭಾಷೆ ಮಾತೃಭಾಷೆಯಾಗಿರಬೇಕು ಎಂದು. ಮಗುವು ತಾನು ಮೊದಲಿಗೆ ತೆಗೆದುಕೊಳ್ಳುವ ಭಾಷೆಯನ್ನು ಅತ್ಯಂತ ಸಹಜವಾಗಿ ಹಾಗೂ ಅಷ್ಟೇ ಸಮರ್ಥವಾಗಿ ತನ್ನದಾಗಿಸಿಕೊಂಡಿರುತ್ತದೆ ಎಂಬ ಸಂಗತಿಯೇ ಶಿಕ್ಷಣ ತಜ್ಞರ ಈ ಸ್ಪಷ್ಟ ಅಭಿಪ್ರಾಯಕ್ಕೆ ಕಾರಣ.

ಪ್ರಸ್ತುತ ನಮ್ಮಲ್ಲಿ ಇಂಗ್ಲೀಷ್ ಮಾಧ್ಯಮದ ಕಡೆಗಿನ ಒಲವು ಹೆಚ್ಚುತ್ತಲೇ ಹೋಗುತ್ತಿದೆ. ಇದಕ್ಕೆ ಕಾರಣಗಳೇನು ಎಂಬುದನ್ನು ಹಲವು ನೆಲೆಗಳಿಂದ ಹುಡುಕಲು ಸಾಧ್ಯವಿದೆ. ಆದರೆ ನಮ್ಮೆದುರು ಇದಕ್ಕಿಂತ ಗಂಭೀರವಾದೊಂದು ಪ್ರಶ್ನೆ ಇದೆ. ನಮ್ಮ ಮಾತೃಭಾಷೆ ಕನ್ನಡ ಸಮರ್ಥ ಶಿಕ್ಷಣ ಮಾಧ್ಯಮವಾಗಿ ಒದಗಿಬರಬಲ್ಲದು ಎಂಬ ಬಗ್ಗೆ ತೀವ್ರವಾದ ಅನುಮಾನಗಳು ಪ್ರಚಲಿತವಾಗಿವೆ. ಅದರಲ್ಲೂ ವಿಜ್ಞಾನದಂತಹ ವಿಷಯವನ್ನು ಕನ್ನಡದಲ್ಲಿ ಕಲಿಸಲು, ಕಲಿಯಲು ಅಸಾಧ್ಯವೇ ಸರಿ ಎಂಬಂತಹ ವಿಪರೀತದ ತೀರ್ಮಾನಗಳು ವ್ಯಕ್ತವಾಗುತ್ತಿವೆ. ವಾಸ್ತವದಲ್ಲಿ ಈಗಿರುವ ಪರಿಸ್ಥಿತಿಯನ್ನು ಹೆಚ್ಚಿನ ಯಾವ ವಿವೇಚನೆಗೂ ಒಳಪಡಿಸದೆ ಪರಿಶೀಲಿಸಿದರೆ ಈ ಮಾತು ನಿಜವೇ ಹೌದು ಎನ್ನಿಸುವಂತೆಯೂ ಇದೆ.

ಆದರೆ, ಸೂಕ್ಷ್ಮವಾದ ಹಾಗೂ ಪ್ರಾಮಾಣಿಕವಾದ ವಿವೇಚನೆಗೆ ಇದೊಂದು ಅಭಿ-ಹಾಸ್ಯಾಸ್ಪದ ಸಂಗತಿ ಎನ್ನುವುದು ಹೊಳೆಯದಿರಲಾರದು. ವಿವಿಧ ನೆಲೆಗಳ ವ್ಯಕ್ತಿಗೆ ಸಹಸ್ರ ವರ್ಷಗಳಿಂದಲೂ ಸಮರ್ಥ ಮಾಧ್ಯಮವಾಗಿ ಒದಗಿ ಪಳಗಿರುವ ಕನ್ನಡದಂತಹ ಪ್ರಾಚೀನ ಭಾಷೆಗೆ ಶಿಕ್ಷಣ ಮಾಧ್ಯಮವಾಗಲು ಸಾಮರ್ಥ್ಯವಿಲ್ಲ ಎಂಬ ಮಾತು ಕೇವಲ ಪೂರ್ವಾಗ್ರಹದಿಂದ ಮಾತ್ರ ಹುಟ್ಟುವಂಥಹುದು.

ಹೀಗೆ ಹೇಳಿದಾಗ ಈಗಿರುವಂತೆಯೇ ಕನ್ನಡವು ಇಂಗ್ಲಿಷಿನಷ್ಟು ಸಮರ್ಥವಾದ ಶಿಕ್ಷಣ ಮಾಧ್ಯಮವಾದೀತೇ ಎಂಬ ಪ್ರಶ್ನೆ ಎದುರಾಗುತ್ತದೆ. ಇಂಗ್ಲೀಷ್ ಎಷ್ಟು ಸಮರ್ಥ ಎಂಬುದು ನಮ್ಮ ಪ್ರಶ್ನೆಯಾಗಬೇಕಾಗಿಲ್ಲ. ಬದಲಿಗೆ ಕನ್ನಡ ಯಾಕೆ

ಸಮರ್ಥವಿಲ್ಲ ಎಂಬುದೇ ನಮ್ಮ ಮುಖ್ಯ ಪ್ರಶ್ನೆ. ಮಾತೃಭಾಷೆ ಎನ್ನುವುದು ನಮಗೆ ದತ್ತವಾಗಿ ಬಂದಿರುವ ಒಂದು ಸಹಜ ಅಭಿವ್ಯಕ್ತ ಸಾಧನ. ಬೇರೆ ಬೇರೆ ನೆಲೆಗಳಲ್ಲಿ ನಮ್ಮ ಕಾಲದ ಅಗತ್ಯಗಳಿಗೆ ತಕ್ಕಂತೆ ಅದನ್ನು ಸಮೃದ್ಧಗೊಳಿಸಿ ಅಣಿಮಾಡುವ ಹೊಣೆ ಆಯಾ ಭಾಷಿಕರದೇ ಆಗಿರುತ್ತದೆ. ಇದನ್ನು ಸಕಾಲದಲ್ಲಿ ನಿರ್ವಹಿಸದೆ ಭಾಷೆಯ ಸಾಮರ್ಥ್ಯವನ್ನೇ ಪ್ರಶ್ನಿಸಿ ಇನ್ನೊಂದು ಭಾಷೆಗೆ ಮೊರೆಹೋಗುವ ಕ್ರಮ ದಿಂದ ಸಾಧಿಸಬಹುದಾದ್ದೇನು ? ಸಹಜವಾಗಿ ಒದಗಿ ಬಂದದ್ದನ್ನು ನಿರಾಕರಿಸಿ ಬಿಡುವಷ್ಟು ಸುಲಭವಾಗಿ ಹೊಸತೊಂದನ್ನು ಅಷ್ಟೇ ಸಲೀಸಾಗಿ ಕಲಿತು ನಮ್ಮದಾಗಿಸಿ ಕೊಳ್ಳಲಾಗದು. ಭಾಷೆಯನ್ನು ಕಲಿಯುವುದೇ ಮುಖ್ಯ ಉದ್ದೇಶವಾಗಿದ್ದಾಗ ಮಾತು ಬೇರೆ. ಶಿಕ್ಷಣ ಮಾಧ್ಯಮವಾಗಿ ಬಳಸಲೆಂದೇ ಕಲಿಯ ಹೊರಟಾಗ ಅನವಶ್ಯಕವಾದ ಒತ್ತಡವನ್ನು ಹೇರಿಕೊಂಡಂತಾಗುತ್ತದೆ.

ಈ ಹಿನ್ನೆಲೆಯಲ್ಲಿ ಕನ್ನಡವು ಶಿಕ್ಷಣ ಮಾಧ್ಯಮದಲ್ಲಿ ಅದರಲ್ಲೂ ವಿಜ್ಞಾನ ಬೋಧನೆಯಲ್ಲಿ ಒದಗಿ ಬರಲು ಇರುವ ಸಮಸ್ಯೆಗಳನ್ನು ಸರಿಯಾಗಿ ಅರ್ಥಮಾಡಿ ಕೊಳ್ಳಬೇಕಾಗಿದೆ. ಈ ವಿಶ್ಲೇಷಣೆಯಿಂದ ಸೂಕ್ತ ಪರಿಹಾರ ಮಾರ್ಗಗಳು ಗೋಚರ ವಾಗುವ ಸಾಧ್ಯತೆ ಇದ್ದೇ ಇದೆ. ಕನ್ನಡವು ಶಿಕ್ಷಣ ಮಾಧ್ಯಮವಾಗಬೇಕು ಎಂಬ ಮಾತು ಘೋಷಣೆಯಾಗಿ ಮಾತ್ರ ಉಳಿಯದೆ ಒಂದು ವಾಸ್ತವವಾಗಿ ರೂಪುಗೊಳ್ಳಲು ದೀರ್ಘವಾದೊಂದು ಸಿದ್ಧತೆಯನ್ನು ನಡೆಸಬೇಕಾಗಿದೆ. ನಾಡಿನ ವಿದ್ವಾಂಸರು, ಅಧ್ಯಾ ಪಕರು ಹಾಗೂ ಸಂಘ ಸಂಸ್ಥೆಗಳು ಈ ಕೆಲಸದಲ್ಲಿ ಕೈಗೂಡಿಸುವುದು ಅನಿವಾರ್ಯ, ಕನ್ನಡ ವಿಶ್ವವಿದ್ಯಾಲಯವು ಈ ದಿಸೆಯಲ್ಲಿ ತನ್ನ ಹೊಣೆಯನ್ನು ನಿರ್ವಹಿಸುವ ಸಲು- ವಾಗಿ ಹತ್ತು ಹಲವು ಅರ್ಥಪೂರ್ಣ ಯೋಜನೆಗಳನ್ನು ಕೈಗೊಂಡಿದೆ.

(ಸೌಜನ್ಯ; ಬಿತ್ತರ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ಕಮಲಾಪುರ-583 221.)

---

ವಿಳಾಸ:- **ಕಲವೀರ ಮನ್ಸಾಚಾರ್**, ಉಪನ್ಯಾಸಕ, ಸಂಕಲನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ಕಮಲಾಪುರ-583 221.

---

ಶಿವಾ ಶಿವಾ ! ಎನ್ನ ಮನವು ನಿಮ್ಮ ನೆನೆಯಲೊಲ್ಲದೆ, ಅನ್ಯಕ್ಕೆ ಹರಿವುತಿ ರ್ಪುದು ನೋಡಾ. ಗುರು ಚರ ಲಿಂಗದ ಸೇವೆಯೆಂದೊಡೆ ಹಿಂದುಳಿವುತಿರ್ಪುದು ನೋಡಾ. ಅನ್ಯರ ಒಡವೆಯಾದ ಹೊನ್ನು ಹೆಣ್ಣು ಮಣ್ಣೆಂದೊಡೆ ಮುಂದುವರಿದು ಓಡುತಿರ್ಪುದು ನೋಡಾ. ಈ ಮನದ ಉಪಟಳವು ಘನವಾಯಿತ್ತು. ಇನ್ನೇನು ಗತಿಯಯ್ಯಾ ಎನಗೆ ಅಖಂಡೇಶ್ವರಾ ?

ಸಿದ್ಧಸಂಗಾ —ಷಣ್ಮುಖಸ್ವಾಮಿ



# ಮಾನವತಾವಾದಿ ಗುರುನಾನಕರು

ಸಿಖ್ ಧರ್ಮವು ವಿಶ್ವದ ಪ್ರಮುಖ ಧರ್ಮದಲ್ಲಿ ಒಂದಾಗಿದೆ. ಎಲ್ಲ ದರ್ಮ ಸಂಸ್ಥಾಪಕರ ಹಾಗೆ ಸಿಖ್ ಧರ್ಮದ ಸಾಂಸ್ಥಾಪಕರಾದ ಗುರುನಾನಕರು ಸಹ ವಿಶ್ವ ಮಾನವ ಹಾಗೂ ವಿಶ್ವ ಪ್ರೇಮ ಸಂದೇಶವನ್ನು ಜನರಿಗೆ ಬೋಧಿಸಿದರು.

ಗುರುನಾನಕರು ತಲವಂಡಿ ಎಂಬ ಗ್ರಾಮದಲ್ಲಿ 1469 ನವಂಬರ್‌ನಲ್ಲಿ ಜನಿಸಿದರು. ಅವರ ತಂದೆಯ ಹೆಸರು ಕಾಳು ಹಾಗೂ ಅವರ ತಾಯಿಯ ಹೆಸರು ತ್ರೀಪ್ತ. ಬಾಲಕನಾಗಿದ್ದಾಗಲೇ ಗುರುನಾನಕರು ತೋರಿದ ಬೌದ್ಧಿಕ ಪ್ರೌಢಿಮೆ ಯಾರನ್ನಾದರೂ ದಂಗುಬಡಿಸುವಂತಹದಿತ್ತು. ಆಗಿಂದಲೇ ಅವರಿಗೆ ಈ ಜಗತ್ತಿನ ಲೌಕಿಕ ವಿಷಯಗಳ ಬಗ್ಗೆ ಅನಾಸಕ್ತಿ. ಹದಿನಾಲ್ಕು ವರ್ಷಗಳಿದ್ದಾಗಲೇ ಅವರ ಮದುವೆಯಾಯಿತು. ಅವರ ಹೆಂಡತಿಯ ಹೆಸರು ಸುಲಕ್ಷ್ಮಿ. ಅವರು ಸಾಂಸಾರಿಕ ಜೀವನದ ಬಗ್ಗೆ ಅವರಿಗೆ ಶ್ರೀ ಚಂದ ಹಾಗೂ ಲಕ್ಷ್ಮಿದಾಸ ಎಂಬ ಇಬ್ಬರು ಮಕ್ಕಳು ಇದ್ದರೆಂಬುದು ಬಿಟ್ಟು ಹೆಚ್ಚಿಗೆ ತಿಳಿದು ಬರುವದಿಲ್ಲ.

ಅವರು ರಾತ್ರಿಯಲ್ಲಾ ದೇವರ ಬಗ್ಗೆ ಹಾಡು ಬರೆಯುವದರಲ್ಲಿ ಹೆಚ್ಚಿನ ಕಾಲ ಕಳೆಯುತ್ತಿದ್ದರು. ಕೊನೆಗೆ ಅವರು ಹೆಚ್ಚು ಹೆಚ್ಚು ತತ್ವಗಳನ್ನು ಹೇಳುವದರಲ್ಲಿ ಕಾಲ ಕಳೆದು ತಮ್ಮ ಅನುಯಾಯಿಗಳನ್ನು ಬೆಳೆಸಿಕೊಂಡರು. ಅವರು ಮೂರ್ತಿ ಪೂಜೆಯ ವಿರುದ್ಧ, ಕಪಟತನ ಹಾಗೂ ಜಾತಿಯ ಆಧಾರಿತ ಹಾಗೂ ತತ್ವ ಆಧಾರಿತ ವಿಂಗಡನೆಗಳ ವಿರುದ್ಧ ತಾತ್ವಿಕವಾಗಿ ಬೋಧನೆ ನೀಡಿದರು. ಆದರೆ ಹೀಗೆ ಹೇಳು- ವಾಗ ಅವರೆಂದು ತಮ್ಮ ವೈಯಕ್ತಿಕ ಅಕಾಂಕ್ಷೆಯನ್ನಾಗಲೀ ಅಥವಾ ತಮ್ಮನ್ನು ದೇವರುಯೆಂದಾಗಲಿ ಕರೆದುಕೊಳ್ಳಲಿಲ್ಲ.

ಸಿಖ್ ಧರ್ಮ ಎಲ್ಲಾ ಜಾತಿ ಹಾಗೂ ಸಮುದಾಯಗಳನ್ನು ತನ್ನ ಕಡೆಗೆ ಸೆಳೆದುಕೊಂಡಿತು. ಸಿಖ್ ಗುರುಗಳು ಮಾನವರೆಲ್ಲ ಒಂದು ಎಂಬ ತತ್ವವನ್ನು ಸಾರಿದರು. ಮಾನವನನ್ನು ಮಾನವನೆಂದು ಗೌರವಿಸಬೇಕೆ ಹೊರತು ಮೇಲಜಾತಿ- ಯವನಲ್ಲವೆಂದು ಸಾರಿದರು. ತನ್ನ ಸಹಚರರ ಸೇವೆ ಸಿಖ್ಖರ ಪ್ರಮುಖ ಲಕ್ಷಣವೆಂದು ಅವರು ಹೇಳಿದರು. ಸಿಖ್ ಧರ್ಮ ಏಕದೇವೋಪಾಸನೆಯಲ್ಲಿ ನಂಬಿಕೆ ಇಟ್ಟು ಅದು ರಾಜ ಹಾಗೂ ಭಿಕ್ಷುಕನನ್ನು ಸಮಾನವಾಗಿ ಕಾಣುವುದಲ್ಲದೇ ಪರಸ್ಪರ ಗೌರವಿಸಲು ತಿಳಿಸುತ್ತದೆ. "ಧರ್ಮವು ಶಬ್ದಗಳಲ್ಲಿ ಇಲ್ಲ, ಅದು ಯಾರು ಮಾನವರನ್ನೆಲ್ಲಾ ಸಮಾನರೆಂದು ಕಾಣುತ್ತಾರೋ ಅವರಲ್ಲಿದೆ." ಎಂದು ತಿಳಿಸಿದರು.

ನಮ್ಮ ಮತ ಬೇರೆಲ್ಲೂ ಇಲ್ಲ. ನಮ್ಮ ಅಹಂಕಾರದಲ್ಲಿದೆ. ಅದು ಬೆಳೆದ ಹಾಗೆ ದೇವರು ಹಾಗೂ ಮಾನವನ ಮಧ್ಯ ಗೋಡೆ ಕಟ್ಟುತ್ತದೆ. ಮತ್ತು ಅದರಿಂದ ಮಾನವನು ಪಾಪದಿಂದ ಪಾಪಕ್ಕೆ ತೊಡಗುತ್ತಾನೆಂದು ಸಿಖ್ಖರ ನಂಬಿಕೆ. ಸಿಖ್ ಧರ್ಮವು ದೇವರ ತಂದೆತನ ಹಾಗೂ ಎಲ್ಲಾ ಮಾನವ ಜೀವಿಗಳ ಭ್ರಾತೃತ್ವದಲ್ಲಿ ಇರಿಸಿಕೊಂಡಿದೆ.

**ಗುರುನಾನಕರ ಮೂಲ ತತ್ವಗಳು:–** ದೇವರು ಒಬ್ಬ. ಪ್ರೀತಿಯೇ ದೇವರು, ಐಕ್ಯತೆಯೇ ದೇವರು. ದೇವರ ದೃಷ್ಟಿಯಲ್ಲಿ ಎಲ್ಲಾ ಮಾನವ ಜೀವಿಗಳು ಸಮಾನರು. ಅವರು ಹುಟ್ಟಿದ ರೀತಿ ಹಾಗೂ ಸಾಯುವ ರೀತಿ ಒಂದೇ. ಜಾತಿ, ಮತ, ಪಂಥ, ಬಣ್ಣಗಳ ವ್ಯತ್ಯಾಸವಿಲ್ಲದೆ ಮಾನವ ಜನಾಂಗದ ಸೇವೆಯಾಗಬೇಕೆಂದು ಅವರು ಹೇಳಿದರು.

ಕವಿ ನನ್ನಿಹಾಲಸಿಂಗ್ ಲಾಯಲ್ ಗುರುನಾನಕರ ಬಗ್ಗೆ ಹೀಗೆ ಹೇಳಿದ್ದಾರೆ.

"ಅವರು ಪರಿಶುದ್ಧರಿದ್ದರು
ಪರಿಶುದ್ಧತೆಯನ್ನೆ ಹೇಳಿದರು
ಪ್ರೀಯಕರರಾಗಿದ್ದರು
ಪ್ರೀತಿಯನ್ನೆ ಬೋಧಿಸಿದರು
ವಿನಯಶೀಲರಿದ್ದರು ಅವರು
ನಮ್ರತೆಯನ್ನೇ ಬೋಧಿಸಿದರು
ಶಾಂತಿ ನ್ಯಾಯದ ನಾಯಕರವರು
ಸಮಾನತೆ ಹಾಗೂ ಶುದ್ಧತೆಯ
ಅವತಾರ ಅವರು".

ಗುರುನಾನಕರ ಅಭಿಪ್ರಾಯದಲ್ಲಿ ಐದು ಪ್ರಾರ್ಥನೆಗಳಿದ್ದಾವೆ. ಪ್ರಾರ್ಥನೆ ಮಾಡಲು ಐದು ಸಮಯಗಳಿದ್ದಾವೆ. ಅವು ಯಾವವೆಂದರೆ, ಮೊದಲನೇಯದು ಸತ್ಯ, ಎರಡನೆಯದು ನ್ಯಾಯ, ಮೂರನೇಯದು ದೇವರ ಹೆಸರಿನಲ್ಲಿ ಪರೋಪಕಾರ, ನಾಲ್ಕನೆಯದು ಒಳ್ಳೆಯ ಗುರಿ, ಐದನೇಯದು ದೇವರ (ಹೊಗಳಿಕೆ) ಆರಾಧನೆ.

ಗುರುನಾನಕರು 1538 ನೇಯ ಇಸ್ವಿಯಲ್ಲಿ ಪಂಜಾಬದ ಕರ್ತಾರಪುರ ಎಂಬಲ್ಲಿ ನಿಧನರಾದರು.

ದೊಡ್ಡ ವ್ಯಕ್ತಿಗಳಲ್ಲಿ ಒಂದೇ ರೀತಿಯಾಗಿ ವಿಚಾರ ಮಾಡುತ್ತಾರೆ ಎಂಬುದಕ್ಕೆ ಗುರುನಾನಕರ ತತ್ವಗಳೇ ಸಾಕ್ಷಿ

—ಮಹಾಂತೇಶ ಮಲ್ಲನಗೌಡ, ಇಂಗ್ಲೀಷ್ ಉಪನ್ಯಾಸಕರು, ಬಾಲಕರ ಸರಕಾರಿ ಕಾಲೇಜ್, ಕೊಪ್ಪಳ.583 231, ರಾಯಚೂರು ಜಿಲ್ಲೆ.



# ಕಾರಣ ಪುರುಷ ಬಸವೇಶ್ವರ ಭಾಗ–9 ರಿಂದ 11

## ವಚನಶಾಸ್ತ್ರಕಾರ ಭಾಗ–9

ವೀರಶೈವ ತತ್ತ್ವದರ್ಶನವು ಭಕ್ತ ಮಹೇಶ ಎಂಬಲ್ಲಿ ದ್ವೈತತತ್ತ್ವವನ್ನು ಪ್ರಸಾದಿ, ಪ್ರಾಣಲಿಂಗಿ ಎಂಬ ಸ್ಥಲಗಳಲ್ಲಿ ಸಂಪೂರ್ಣವಾಗಿ ಅದ್ವೈತತತ್ವವನ್ನೂ ಶರಣ, ಐಕ್ಯ ಎಂಬ ಸ್ಥಳಗಳಲ್ಲಿ ಸಂಪೂರ್ಣವಾಗಿ ಅದ್ವೈತ ತತ್ವದಲ್ಲಿ ಲೀನವಾಗು ವಿಕೆಯನ್ನು ಹೀಗೆ ಮಾನವನ ಆಧ್ಯಾತ್ಮಿಕ ವಿಕಾಸದ ಆರು ಮೆಟ್ಟಿಲು-ಗಳನ್ನು ವ್ಯವಸ್ಥಿತವಾಗಿ ರೂಪಿಸಿರುವ ಶಿವಯೋಗದರ್ಶನವಾಗಿದೆ. ಈ ಸ್ಥಲಗಳನ್ನು ಸ್ಪಷ್ಟವಾಗಿ ತನ್ನ ವಚನಗಳಲ್ಲಿ ಬಸವಣ್ಣನವರೇ ಕನ್ನಡದಲ್ಲಿ ಪ್ರಾರಂಭದಲ್ಲಿ ನಿರೂಪಿಸಿ-ದವರಾಗಿರುವರೆಂದು ಕಾಣುತ್ತದೆ. ಮುಂದೆ ಚೆನ್ನಬಸವಣ್ಣನವರು ಇದಕ್ಕೆ ಹೆಚ್ಚು ಶಾಸ್ತ್ರಸೂಕ್ಷ್ಮತೆಯನ್ನು ತಮ್ಮ ವಚನಗಳಲ್ಲಿ ನಿರೂಪಿಸಿದರು.

ಬಸವತತ್ವದರ್ಶನ ಎಂಬ ಬೃಹತ್ ಗ್ರಂಥದಲ್ಲಿ ಮಾತೆ ಮಹಾದೇವಿಯವರು ಅಣ್ಣನ ವಚನಗಳು ವಚನಶಾಸ್ತ್ರ ಎಂದು ತಿಳಿಸಿರುವುದು ಒಪ್ಪತಕ್ಕದ್ದಾಗಿದೆ.

"ವಚನಸಾಹಿತ್ಯದಲ್ಲಿ ಬುದ್ಧಿಗೆ ಬೇಕಾದ ಆಹಾರ ಮಣ್ಣಿನ ಮರೆಯಲ್ಲಿ ಇರುವ ಅದಿರಿನಂತೆ ಹೃದಯದ ಆಹಾರದ ಮಧ್ಯೆ ಇದೆ" ಎಂದು ಅವರು ಮಾರ್ಮಿಕವಾಗಿ ಬರೆದಿದ್ದಾರೆ.

ಚೆನ್ನಬಸವಣ್ಣನವರು "ಬಸವಣ್ಣಾ, ಓಂಕಾರದಿಂದತ್ತತ್ತ ನೀನೆ; ಪ್ರಥಮಾ-ಚಾರ್ಯ ನೀನೆ; ಲಿಂಗಾಚಾರ್ಯ ನೀನೆ; ಜಂಗಮಾಚಾರ್ಯ ನೀನೇ; ಸರ್ವಾ-ಚಾರ್ಯ ನೀನೆ ಎಂದು ಕೊಂಡಾಡಿದುದುಂಟು. ಪುಟ ೩೦.

ಭೀಮಕವಿಯ ಬಸವಪುರಾಣದಲ್ಲಿ (೯-೩೩ರಲ್ಲಿ) ಶೀಲವಂತರ ಕೈಯ್ಯ ಕನ್ನಡಿ ಕಾಲಕಂಠನ ಕೂರಲಗು ಎಂದು ಬಸವಣ್ಣನವರನ್ನು ಸ್ತುತಿಸಿದುದಿದೆ.

ಮುಂದೆ ಶಿವಯೋಗಸಾಕ್ಷಾತ್ಕಾರದ ವರ್ಣನೆಯ ವಚನವಿದೆ, ಅಂತರಂಗದೊಳಿರ್ದ ನಿರಾಕಾರಲಿಂಗವದು ಸಾಕಾರ ಲಿಂಗವ ಮಾಡಿ ಶ್ರೀ ಗುರುಸ್ವಾಮಿ

ಕರಸ್ಥಲಕ್ಕೆ ತಂದುಕೊಟ್ಟ ಲಿಂಗವು
ಅಂತರಂಗವನಾವರಿಸಿ, ಅಂತರಂಗದ
ಕರಣಂಗಳೇ ಕಿರಣಂಗಳಾಗಿ, ಆ ಬೆಳಗುವ

ಚಿದಂಶಿಕವೆ ಪ್ರಾಣಲಿಂಗವು ಆ ಮೂಲ ಚೈತನ್ಯವೇ
ಭಾವಲಿಂಗವು ಇದನರಿದು ನೋಡುವ ನೋಟ
ಭಾವಪರಿಪೂರ್ಣವಾಗಿ ತಾನು ತಾನಾದಲ್ಲಿ
ಇದಿರಿಟ್ಟು ತೋರುವದಿಲ್ಲವಾಗಿ ಅಖಂಡ ಪರಿಪೂರ್ಣವಪ್ಪ
ನಿಜವು ತಾನೆ ಕೂಡಲಸಂಗಮದೇವಾ.

''ಮಹಾತ್ಮ ಬಸವಣ್ಣನವರ ಈ ವಚನವು ತುಂಬ ಸಾತ್ವಿಕವೂ ಮಾರ್ಮಿಕವೂ ಆಗಿದೆ'' ಲಿಂಗತತ್ವದರ್ಪಣ, ಸ್ವಾಮಿ, ಲಿಂಗಾನಂದ ೩

ಬಸವಣ್ಣನನ್ನು ಕುರಿತು ಕನ್ನಡದಲ್ಲಿ ವೀರಶೈವ ಕವಿಗಳಾದ ಹರಿಹರ, ಭೀಮಕವಿ, ಸಿಂಗಿರಾಜ, ಷಡಕ್ಷರಿ ಮುಂತಾದವರು ಕಾವ್ಯಗಳನ್ನು ಬರೆದು ಅವನ ಹಿರಿಮೆಯನ್ನು ಮಹಿಮೆಯನ್ನು ಕೊಂಡಾಡಿರುವದೇ ಅಲ್ಲದೆ, ಬಸವಣ್ಣನ ಸಮಕಾಲೀನರಾದ ಅಲ್ಲಮಪ್ರಭು, ಮಹಾದೇವಿಯಕ್ಕ, ಚೆನ್ನಬಸವೇಶ್ವರ, ಮಡಿವಾಳ ಮಾಚಯ್ಯ, ಸಕಳೇಶ ಮಾದರಸ ಮುಂತಾದ ಹಲವು ಶರಣ ಶ್ರೇಷ್ಠರೂ ಅವನನ್ನು ಮುಕ್ತಕಂಠದಿಂದ ಸ್ತುತಿಸಿದುದು ಕಂಡು ಬರುತ್ತದೆ.

"ಭಕ್ತಿಯೇ ಓಗರವಾಗಿ ಸತ್ಯವೇ ಮೇಲೋಗರವಾಗಿ ನಿಜತತ್ವವೇ ಸ್ವಯವಾಗಿ ಗುಹೇಶ್ವರಲಿಂಗಕ್ಕೆ ಇಕ್ಕಬಲ್ಲವ ಸಂಗನ ಬಸವಣ್ಣನಲ್ಲದಿಲ್ಲಾ" ಅಲ್ಲಮ ಪ್ರಭುದೇವರ ವಚನ,

ಬಸವಣ್ಣನನ್ನು ನೆನೆದರೆ ಸುಖಸಾಗರದಲ್ಲಿ ಓಲಾಡುವಂತಾಗುವುದೆಂದು ಸಿದ್ಧರಾಮನು ಹರ್ಷವು ಉಕ್ಕಿ ನುಡಿದಿದ್ದನು.

ಮಡಿವಾಳ ಮಾಚಯ್ಯನು, ಎತ್ತೆತ್ತ ನೋಡಿದಡೆ ಬಸವನೆಂಬ ಬಳ್ಳಿ
ಎತ್ತ ನೋಡಿದಡೆ ಲಿಂಗವೆಂಬ ಗೊಂಚಲು
ಒತ್ತಿ ಹಿಂಡಿದಡೆ ಭಕ್ತಿಯೆಂಬ ರಸವಯ್ಯ!

ಎಂದು ಹೊಗಳಿರುತ್ತಾನೆ.

ಶ್ರೇಷ್ಠಳಾದ ಮಹಾದೇವಿಯಕ್ಕನು "ಚೆನ್ನಮಲ್ಲಿಕಾರ್ಜುನಾ, ನಿಮ್ಮ ಶರಣ ಬಸವಣ್ಣನಿದ್ದ ಕ್ಷೇತ್ರ ಅವಿಮುಕ್ತಿ ಕ್ಷೇತ್ರವಾಗಿ ಆನು ಬಸವಣ್ಣನ ಶ್ರೀ ಪಾದಕ್ಕೆ ನಮೋನಮೋ ಎನುತಿರ್ದೆನು" ಎಂದು ಬಸವಣ್ಣನ ಹಿರಿಮೆಯನ್ನು ವಂದಿಸಿದ್ದಳು.

ಅನುಭವ ಮಂಟಪದಲ್ಲಿ ಶರಣರನ್ನು ಸೇರಿಸಿ ಆಧ್ಯಾತ್ಮಗೋಷ್ಠಿಗಳನ್ನೇರ್ಪಡಿಸಿದ ಬಸವಣ್ಣನು 'ಕಲ್ಯಾಣವ ಕೈಲಾಸವೆನಿಸಿದೆ ಬಸವಂ' ಎಂಬ ಮಾರ್ಮಿಕವಾದ ಹೊಗಳಿಕೆಯನ್ನು ಪಡೆದನು.



"ಅವರೆಲ್ಲರ ಸ್ತುತಿಗಳನ್ನು ಸಂಗ್ರಹಿದರೆ ಅದೊಂದು ಬೃಹತ್ ಕೋಶವೇ ಆದೀತು"

## ಮುಂದಿನ ಕವಿಗಳ ಮೇಲೆ ಪ್ರಭಾವ ಭಾಗ-10

ಬಸವಣ್ಣನವರು ಹಾಗೂ ಇತರ ವಚನಕಾರರಿಂದ ಮುಂದಿನ ಕನ್ನಡ ಕವಿಗಳಲ್ಲಿ ವೀರಶೈವ ಕವಿಗಳೆಲ್ಲರೂ ಪ್ರಭಾವಿತರಾಗಿರುವರು ಈ ವಚನಕಾರರಲ್ಲಿ ಬಹಳ ಜನರು ಅವರ ಕಾವ್ಯನಾಯಕರಾಗಿದ್ದಾರೆ. ಅಲ್ಲದೆ, ತೆಲಗು, ತಮಿಳು, ಮರಾಠಿ, ಸಂಸ್ಕೃತ ಕವಿಗಳ ಮೇಲೆ ಆದ ಪ್ರಭಾವವನ್ನು ಹಿಂದೆ ತಿಳಿಸಲಾಗಿದೆ.

ವೀರಶೈವರಲ್ಲದೆ ಇತರ ಕವಿಗಳೂ ಬಸವಣ್ಣನವರ ಹಾಗೂ ಇತರ ಕೆಲವರ ವಚನಗಳಿಂದ ಪ್ರಭಾವಿತರಾಗಿ ಅವರ ಶೈಲಿಯನ್ನು ಭಾವನೆಗಳನ್ನು ತಮ್ಮ ಗ್ರಂಥಗಳಲ್ಲಿ ಉಪಯೋಗಿಸಿಕೊಂಡಿದ್ದಾರೆ.

ಬಸವಣ್ಣನವರು ಲಿಂಗೈಕ್ಯರಾದ ಇಪ್ಪತ್ತು ವರ್ಷಗಳಲ್ಲಿ ಅಂದರೆ, ೧೧೮೮ರಿಂದ ಕವಿವರ ನೇಮಿಚಂದ್ರನು ತನ್ನ ಲೀಲಾವತೀ ಎಂಬ ಶೃಂಗಾರಕಾವ್ಯದಲ್ಲಿ ಅವರ ಶೈಲಿ ಮತ್ತು ಕಲ್ಪನೆಗಳನ್ನು ಅನುಕರಿಸಿದ ಹಲವು ಉದಾಹರಣೆಗಳನ್ನು ಡಾ। ಜಿ. ಎಸ್. ಶಿವರುದ್ರಪ್ಪನವರು ವಚನಕಾರರು ಮತ್ತು ನೇಮಿಚಂದ್ರ ಎಂಬ ಲೇಖನ ದಲ್ಲಿ ಬಹಳ ಕುತೂಹಲಪ್ರದವಾಗಿ ಎತ್ತಿ ತಿಳಿಸಿದ್ದಾರೆ

ಮಧ್ಯದೊಳಗೆ ಮುರಿದು ಲೀಲಾವತಿ ಕಾವ್ಯದ ೨-೧೨೩ನೆಯ ಶತಮಾನ ಎಂದು ಪ್ರಾರಂಭವಾಗುವ ಇಡೀ ಪದ್ಯವು ಬಸವಣ್ಣನವರ ವಚನದ ವಿಸ್ತೃತ ರೂಪವೆಂಬುದು ಆಶ್ಚರ್ಯಕರವಾಗಿದೆ.

'ಆದರೆ ವೀರಶೈವೇತರ ಕವಿಗಳ ಮೇಲೂ ವಚನಕಾರರು ಪ್ರಭಾವ ತಕ್ಕಷ್ಟು ಆಗಿದೆಯೆಂಬುದು ವಿಶೇಷದ ಸಂಗತಿಯಷ್ಟೇ ಅಲ್ಲ, ವಚನವಾಙ್ಮಯದ ಮಹತ್ವಕ್ಕೂ ಸಾಕ್ಷಿಯಾಗಿದೆ' ಜಿ. ಎಸ್. ಶಿವರುದ್ರಪ್ಪ. ಸಾಧನೆ ಪುಟ ೪೦-೪೮.

ಡಾ॥ ಚಿದಾನಂದಮೂರ್ತಿಯವರು ಸಂಶೋಧನ ತರಂಗ ಭಾಗ ೧ ರಲ್ಲಿ ಉಗಾಭೋಗಗಳ ಮತ್ತು ವಚನಗಳು ಎಂಬ ಲೇಖನದಲ್ಲಿ (ಪುಟ ೩೬-೪೯) ಬಸವಣ್ಣನವರ ವಚನಗಳಿಂದ ಪುರಂದರದಾಸರು ತುಂಬಾ ಪ್ರಭಾವಿತರಾಗಿ ಉಗಾಭೋಗಗಳನ್ನು ರಚಿಸಿದುದನ್ನು ಸೋದಾಹರಣವಾಗಿ ವಿವೇಚಿಸಿದ್ದರು.

''ಹರಿದಾಸರು ಶಿವಶರಣರ ವಚನಗಳನ್ನು ಓದಿ ಆನಂದಿಸಿ ಅದರ ಗುರುತುಗಳನ್ನು ತಮ್ಮ ಕೃತಿಗಳಲ್ಲಿ ಉಳಿಸಿರುವುದು ಹರಿದಾಸರ ವಿಶಾಲ ಹೃದಯಕ್ಕೆ ಸಾಕ್ಷಿ,

ವಚನಗಳ ಶ್ರೇಷ್ಠತೆಗೆ ಅತ್ಯಪೂರ್ವ ರೀತಿಯ ವಿಮರ್ಶೆ' ಎಂದು ನಿರ್ಣಯ ಮಾಡಿದರು ಅನುಕರಣವು ಮೆಚ್ಚಿಗೆಯ ಒಂದು ರೂಪವಲ್ಲವೇ ?

ಬಸವಣ್ಣನವರ ವಡನಗಳಿಂದ ಕುಮಾರವ್ಯಾಸ ವಿಶೇಷ ಪ್ರಭಾವಿತನಾಗಿದ್ದಾನೆ. ಕೃಷ್ಣ ಹಾರವನ ವೇಷದಿಂದ ಕರ್ಣನನ್ನು ಬೇಡಿದ ಕಥೆಯ ಉಲ್ಲೇಖವು ಬಸವ ಣ್ಣನವರ ವಚನದಲ್ಲಿ ಬಂದಿತ್ತು.

ಕೀಳಿಂಗಲ್ಲದೆ ಹಯನು ಕರೆಯದು ಎಂಬ ಬಸವಣ್ಣನವರ ವಚನದ ನೆನಪು 'ಕೀಳಿಗಾಕಳು ತೊರೆವುದಲ್ಲದೆ" ಎಂಬ ಸಾಲಿನಲ್ಲಿ ಕಾಣುತ್ತದೆ,

ಅಭಿಮನ್ಯುವಿನ ಮರಣದ ಸುದ್ದಿ ಕೇಳಿ ಆಘಾತದಿಂದ ನೆಲದ ಮೇಲೆ ಮಲ ಗಿದ ಯುಧಿಷ್ಠಿರನ ದುಃಖವರ್ಣನೆಯಲ್ಲಿ ಭೂಪಾಲಕನ ಸೈರಣೆಗಾಯ್ತು ಮಹ ನಂಗವಿ ಎಂಬಲ್ಲಿ. ಮಹನವಮಿ ಎಂಬುದನ್ನು ಹಬ್ಬ ಎಂಬ ಅರ್ಥದಲ್ಲಿ ಬಳಸದೆ ಮರಣ ಎಂಬರ್ಥದಲ್ಲಿ ಬಳಸಿದುದು. "ಬಸವಣ್ಣನವರ ಮರಣವೇ ಮಹಾನವಮಿ ಯೆನೆಗೆ ಎಂಬ ಮಹಾ ವಾಕ್ಯದ ಪ್ರಭಾವದಿಂದ ಬಂದುದು.

ಬಹುಶಃ ೧೭ ನೇ ಶತಮಾನದಲ್ಲಿದ್ದ ಮರಾಠಿಸಂತ ಶ್ರೇಷ್ಠ ತುಕಾರಾಮನು ಬಸವಣ್ಣನವರ ವಚನದಲ್ಲಿ ಹಾಗದ ಕೆರವನ್ನು ದೇಗುಲದ ಹೊರಗೆ ಬಿಟ್ಟ ಒಳಗೆ ಹೋದವನಿಗೆ ಕೆರದ ಧ್ಯಾನವೇ ವಿನಃ ದೇವರ ಧ್ಯಾನವಲ್ಲ ಎಂದ ವಚನದ ಅಭಿಪ್ರಾಯವನ್ನು ತನ್ನ ಆ ಭಂಗವೊಂದರಲ್ಲಿ ಹೇಳಿದ್ದನು.

ಬಸವಣ್ಣನವರ ಮಹಾವೀರವ್ರತಿಯು ಕೈಮೀರಿ ಹೋಗುವ ಸಂದರ್ಭದಲ್ಲಿ ಬಹಳ ಸೋಜ್ಜ್ವಲವಾಗಿ ಪ್ರಕಾಶನಗೊಂಡಿದೆ.

"ನಾಳೆ ಬಪ್ಪದು ನಮಗಿಂದೇ ಬರಲಿ. ಇದಕಾರಂಜುವರು ? ಇದಕಾರಳು ಕುವರು ? ಯದ್ಭಾವಂ ತದ್ ಭವತಿ, ಉರಿ ಬರಲಿ ಸಿರಿ ಬರಲಿ ಬೇಕು ಬೇಡೆನ್ನೆನು.

" ಮರಣವೇ ಮಹಾನವಮಿಯೆನೆಗೆ ,

ಎಂಬ ಮಹಿಮಾಮಯವಾದ ಮಾತುಗಳನ್ನು ನೋಡಿ, ಶರಣರ ಗುಣವನ್ನು ಮರ ಣದಲ್ಲಿ ನೋಡು ಎಂಬ ಮಾತು ನೆನಪಿಗೆ ಬರುತ್ತದೆ........ನೀವು ಹೇಳಿದ ಮಣಿ ಹವ ಮಾಡಿದೆ ಇನ್ನು ನಿಮ್ಮೊಳಗೆ ಕೂಡಿ ಕೊಳ್ಳಾ ಕೂ. ಸಂ, ದೇವಾ" ಎಂದು ಪ್ರಾರ್ಥಿಸಿದರು.



ಇರಿಸಿಕೊಂಡು ಭಕ್ತರಾದರೆಮ್ಮವರು
ತರಿಸಿಕೊಂಡು ಭಕ್ತರಾದರೆಮ್ಮವರು
ಕೂಡಲಸಂಗನ ಶರಣರಿಗೆ ಮುಳಿಸತಾಳಿ
ಎನ್ನ ಭಕ್ತಿ ಅರೆಯಾಯಿತ್ತು

ಎಂಬ ವಚನವು ಬಿಜ್ಜಳನ ಕೊಲೆಯ ಅನಂತರದಲ್ಲಿ ನಡೆದ ಸಾಮೂಹಿಕವಾದ ಸೇಡಿನ ಹಿಂಸೆಯನ್ನು ಸ್ಪಷ್ಟವಾಗಿ ತೋರಿಸುತ್ತದೆ ಎಂದು ಕಾಣುತ್ತದೆ. ಇಲ್ಲಿ ಪ್ರತೀಕಾರ ಮಾಡಿ, ಹಿಂಸೆಯ ಮಾರ್ಗವನ್ನು ಕೈಕೊಂಡ ಶರಣರ ಕ್ರಮವನ್ನು ಬಸವಣ್ಣನವರು ಒಪ್ಪದೆ ಅವರನ್ನು ಕುರಿತು ಕೋಪವನ್ನು ತಾಳಿದ್ದರೇನೋ ಎಂದು ಅನುಮಾನಿಸಲು ಅವಕಾಶವಿದೆ.

ಸ್ವತಃ ಅಹಿಂಸಾವಾದಿಯಾಗಿದ್ದ ಬಸವಣ್ಣನವರು ಡಾ. ಚಿದಾನಂದಮೂರ್ತಿ ಯವರು ತಿಳಿಸಿದಂತೆ, ತಂದೆಯು ಶಿವನ ವಿಗ್ರಹಕ್ಕೆ ಗೌರವ ತೋರಿಸದಿದ್ದ ತಂದೆ ಯನ್ನೇ ಕೊಂದುದನ್ನು ಬಸವಣ್ಣನವರು ಮೆಚ್ಚಿದ್ದರು.

ಆದರೆ, ಇಲ್ಲಿ ಬಸವಣ್ಣನವರಿಗೆ ತನ್ನ ಅಹಿಂಸವಾದ ಹಾಗೆ ಶಿವಭಕ್ತರು ಆತ್ಮ ರಕ್ಷಣೆಗಾಗಿ ಕೈಕೊಂಡ ಹಿಂಸಾಮಾರ್ಗ ಇವುಗಳ ವಿಶುದ್ಧ ಸಂದರ್ಭಕ್ಕಾಗಿ ಇರಿಸು ಮುರಿಸಾಗಿತ್ತು. ಶರಣರ ಕ್ರಮವನ್ನು ಪೂರ್ತಿಯಾಗಿ ಬೆಂಬಲಿಸದಿದ್ದುದರಿಂದ ತನ್ನ ಭಕ್ತಿ ಅರೆ ಅರ್ಧ) ಆಯಿತು ಎಂಬ ಅನುತಾಪವು ಕಾಣುತ್ತದೆ. ಈ ಸಂಕಟದಲ್ಲಿ ಸಾಕು ಮಾಡು ತಂದೆ ಲೋಕದಾಟವನಿನ್ನು ಎಂದು ಕೂಡಲಸಂಗಮಕ್ಕೆ ತೆರಳಿದ್ದಿರ ಬೇಕು. ಬಸವಣ್ಣನವರ ನಿರ್ವಾಣದ ಅನಂತರ ಅಕ್ಕನಾದ ನಾಗಮ್ಮ ಶೋಕಿ ಸುವ ವಚನಗಳು ಆಕೆಯ ನಿರ್ಭರ ದುಃಖದ ಆರ್ತನಾದವಾಗಿದೆ........

ಶಶಿಧರನಟ್ಟದ ಮಣಿಹ ಪೂರೈಸಿತ್ತೆಂದ ನೀವು ಲಿಂಗೈಕ್ಯವಾದರೆ,
ಭಕ್ತಿ ನಿಮ್ಮೊಡನೆ ಹೋಯಿತ್ತಯ್ಯಾ!
ನಿಮ್ಮೊಡನೆ ಸದಾಚಾರ ಹೋಯಿತ್ತಯ್ಯಾj
ನಿಮ್ಮೊಡನೆ ಅಸಂಖ್ಯಾತರು ಹೋದರೋ ಅಣ್ಣಾ !
ಮರ್ತ್ಯಲೋಕದ ಮಹಾಮನೆ ಶೂನ್ಯವಾಯಿತ್ತು ಬಸವಣ್ಣ........
ಎನ್ನನೊಯ್ಯದೆ ಹೋದೆಯಲ್ಲ ಪಂಚವಿರುವ ಮೂರ್ತಿ ಬಸವಣ್ಣ

ಕಬ್ಬಿಣವನ್ನು ಸ್ಪರ್ಶಿಸಿ ಬಂಗಾರ ಮಾಡುವಂಥ ಪವಾಡಪುರುಷ ಪಂಚ (ಸುಂದರ)ಮೂರ್ತಿ ಬಸವಣ್ಣನು ಹೋದೊಡನೆ ಅಸಂಖ್ಯಾತ ಶರಣರು ಕೈಲಾಸಕ್ಕೆ

ಮರಳಿ ಮರ್ತ್ಯಲೋಕದ ಮಹಾಮನೆ ಶೂನ್ಯವಾಯಿತ್ತು ಎಂಬ ಮಾತು ಹೃದಯವಿದ್ರಾವಕವಾಗಿದೆ.

ಆವರೆ ಚನ್ನಬಸವಣ್ಣನವರು ಬಿಜ್ಜಳನ ಮಗ ರಾಯಮುರಾರಿ ಸೋವಿದೇವನ ಮಹಾಮಂತ್ರಿಯಾಗಿ ಸಮಾಜದಲ್ಲಿ ತಕ್ಕಮಟ್ಟಿಗೆ ನೆಮ್ಮದಿ ನೆಲಸಿದ್ದಿರಬೇಕು.

### ಮುಕ್ತಾಯಕ್ಕೆ ಮುನ್ನ

ಭುವನದ ಭಾಗ್ಯದಿಂದಲೆಂಬಂತೆ ಮಹಾತ್ಮ ಬಸವಣ್ಣನವರು ಕರ್ನಾಟಕದಲ್ಲಿ ಜನಿಸಿ ತಮ್ಮ ಜೀವಿತಾವಧಿಯ ಬಹುಶಃ ಐವತ್ತು ವರ್ಷಗಳಲ್ಲಿ ಸಾಧಿಸಿದ ಮಹತ್ಕಾರ್ಯಗಳಿಂದ ಅವರು ಜಗದ್ವಂದ್ಯ ವಿಭೂತಿಪುರುಷರು ಎಂದು ಹೇಳಬೇಕು. ಅವರು ನುಡಿದಂತೆ ನಡೆದು ತೋರಿಸಿದರು; ನಡೆದಂತೆ ನುಡಿದರು. ಶೀಲದಂತೆ ಶೈಲಿ; ಎಂಬುದು ಅವರ ವಚನಶೈಲಿಯಲ್ಲಿ ಸಂಪೂರ್ಣವಾಗಿ ಒಡಮೂಡಿದೆ. ಅವರ ವಚನಗಳು ಅಚ್ಚಗನ್ನಡದ ಕೈವೊಕ್ಕ ತವನಿಧಿ ಎನ್ನಬಹುದು.

ಅವರ ಕಾಲಕ್ಕಿಂತ ಹಿಂದೆಯೇ ವೀರಶೈವಧರ್ಮತತ್ವಗಳು ವಿಕಾಸಹೊಂದುತ್ತಿದ್ದರೂ ಅವರಿಗಿಂತ ಮೊದಲು ಈ ಧರ್ಮಕ್ಕೆ ವೀರಶೈವ ಧರ್ಮವೆಂದು ಹೆಸರು ಬಂದಿರಲಿಲ್ಲ ಎಂದು ಡಾ॥ ಚಿದಾನಂದ ಮೂರ್ತಿಯವರು ಬರೆದಿದ್ದಾರೆ. ವೀರಶೈವ ಧರ್ಮದ ಪುನರುಜ್ಜೀವನವಾಗುವಲ್ಲಿ ಅವರು ವಹಿಸಿದ ಪಾತ್ರವು ಬಹಳ ಪ್ರಭಾವವನ್ನು ಬೀರಿತು. ಅವರು ತಂದ ಸಮಾಜ ಸುಧಾರಣೆಯ ಅಂಶಗಳು ಇಂದಿಗೂ ಎಂದಿಗೂ ಪ್ರಸ್ತುತವಾಗಿದೆ ಎಂದು ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ.

— **ಡಾ॥ ಎಲ್. ಆರ್. ಹೆಗಡೆ,** ಸಿದ್ದಾಪುರ, ಉತ್ತರ ಕನ್ನಡ–581355

---

ಆಚಾರಲಿಂಗವಿಡಿದು ಗುರುಲಿಂಗವ ಕಾಣಬೇಕು. ಗುರುಲಿಂಗವಿಡಿದು ಶಿವಲಿಂಗವ ಕಾಣಬೇಕು. ಶಿವಲಿಂಗವಿಡಿದು ಜಂಗಮವ ಕಾಣಬೇಕು. ಜಂಗಮಲಿಂಗವಿಡಿದು ಪ್ರಸಾದಲಿಂಗವ ಕಾಣಬೇಕು. ಪ್ರಸಾದಲಿಂಗವಿಡಿದು ಮಹಾಲಿಂಗವ ಕಾಣಬೇಕು. ಇಂತೀ ಷಡುಸ್ಥಲದ ಧಾತುವ ಸಂಬಂಧಿಸಿ ಒಂದು ಮಾಡಿಕೊಂಡಿಪ್ಪ ಈ ಕಲಸ್ಥಲದ ಅನುವ ಗುಹೇಶ್ವರನ ಶರಣ ಸಂಗನಬಸವಣ್ಣ ಬಲ್ಲ; ಬೆಸಗೊಂಬಾರಾ ಸಿದ್ಧರಾಮಯ್ಯ.

**ಅಲ್ಲಮಪ್ರಭು**



## ಶೀತಲ ಮಾತಾ ಮತ್ತು ಪೀರಾನ್ ಪೀರ್

ಖಾಂಡವಾ ಇಂದೂರ ದಾರಿಯಲ್ಲಿ ಹೋಗುವಾಗ ನರ್ಮದಾ ನದಿಯ ನಂತರ ಪ್ರವಾಸಿಗರಿಗೆ ಹುಲ್ಲುಗಾವಲಿನ ಪರ್ವತವು ಆಕರ್ಷಿಸಿ ಮನಸೆಳೆಯುತ್ತದೆ. ಪರ್ವತಶಿಖರದ ಮೇಲಿನ ಶೀತಲಾ ದೇವಿಯ ಗುಡಿ ಪೀರಾನ ಗೋರಿ ಸ್ನೇಹ ಸೇತುವೆಯನ್ನು ನಿರ್ಮಿಸಿದೆ.

ಚಿಕ್ಕ ದಿನ್ನೆಯ ಮೇಲಿನ ಗೋರಿಯ ಹಜರತ್ ಸಯ್ಯದ್ ಜಮಾಲದ್ದೀನ್ ಶಾಹ ಕಾದರಿಯುದಾಗಿದೆ. ನೂರಾರು ವರ್ಷಗಳ ಹಿಂದೆ ಪೀರನು ಅರಬಸ್ಥಾನದಿಂದ ಇಲ್ಲಿಗೆ ಬಂದು ವಾಸಿಸುತ್ತಿದ್ದಲ್ಲಿ ಅಲ್ಲಾನ ಭಕ್ತಿಯಲ್ಲಿ ಕಾಲ ಕಳೆಯುತ್ತ ಜನಸೇವೆ ಮಾಡುತ್ತ ದೇಹತ್ಯಾಗ ಮಾಡಿದನು. ಮಧ್ಯಯುಗದ ಇತಿಹಾಸವು ಈ ರೀತಿ ಹೇಳುತ್ತದೆ. ಮೊಗಲ ಬಾದಶಾಹ ಔರಂಗ ಜೇಬನು ದಕ್ಷಿಣದಲ್ಲಿ ಜಯಸಾಧಿಸಲು ಬಂದಾಗ ಇಲ್ಲಿಯ ಸೃಷ್ಟಿಸೌಂದರ್ಯಕ್ಕೆ ಮನಸೋತು ತನ್ನ ಮಗಳ ಗುಲಶನ್ ಆರಾಳ ಹೆಸರನ್ನು ತಾನಿದ್ದ ವಸತಿ ಪ್ರದೇಶಕ್ಕೆ ಇಟ್ಟು ಗುಲಶಾನಬಾದ ಎಂದು ಕರೆದನು. ಇದು ಬನಕುಂವರ ನದಿ ಗುಂಟ ಇದ್ದು ಮುಂದೆ ಬಾತುಂಡಿ ಎಂದು ಅಪಭ್ರಂಶಗೊಂಡಿತು ಗುಲಕನಾಬಾದ ಎಂದರೆ ಹೂಗಳನಗರ. ಅಂದಿನ ಕಾಗದ ಪತ್ರಗಳಿಂದ ಗುಲಶನಾಬಾದ ಜೊತೆಗೆ ಪೀರಾನ ಪೀರಾ ಉಲ್ಲೇಖವು ಸಿಗುತ್ತದೆ.

ಮುಂದೆ ಪೇಶವೆಯವರು ಬಂದರು. ಪುಣೆಯಿಂದ ಉತ್ತರಕ್ಕೆ ಹೋಗುವಾಗ ಪೇಶವೆಯವರು ತಮ್ಮ ಅಸ್ತಿತ್ವವನ್ನು ಗುಡ್ಡದಡಿಗೆ 20 ಎಕರೆ ಉದ್ದಗಲದ ಮೈದಾನದಲ್ಲಿಟ್ಟರೂ. ಈ ದೊಡ್ಡ ಸೈನ್ಯಕ್ಕೆ ನೀರಿನ ಬಳಕೆಯು ಅಲ್ಲಿಯೆ ಬಾವಿಯಿಂದಲೇ ಆಗುತ್ತಿತ್ತು. ಒಂದು ದಿವಸ ಬಾವಿಯ ನೆಲ ಕಾಣಹತ್ತಿ ನೀರು ಮುಗಿಯತೊಡಗಿತ್ತು. ಹೀಗಾಗಿ ಚಿಂತೆ ಹುಟ್ಟಿ ಬಾಜಿರಾವ್ ಪೇಶವೆಗೆ ಈ ಸಂಗತಿ ತಿಳಿದು ಶಾಂತತೆಯಿಂದ ಕಾಳಜಿ ಬೇಡ. ಪೀರಾನ ಪೀರನಿಗೆ ನಮ್ಮ ಕಾಳಜಿ ಎಂದುತ್ತರಿಸಿದನು ಆಗಲೇ ಚಮತ್ಕಾರ ಘಟಿಸಿತು. ರಾಟಿಗೆ ಬಾವಿಯ ತಳದಿಂದ ಝರಿ ಒಡೆದು ನೀರು ಬರಹತ್ತಿ ಬಾವಿಯು ನೀರಿನಿಂದ ತುಂಬತೊಡಗಿತು. ಪೇಶವೆಗೆ ಈ ಸಂಗತಿ ತಿಳಿದು ಮಾವಿನ ತೋಪು ಉಳ್ಳ 15 ಎಕರೆ ಭೂಮಿಯನ್ನು ಪೀರಾನ ಪೀರನ ದರ್ಗಕ್ಕೆ ಕೊಟ್ಟನು. ಈ ದರ್ಗದ ಎಲ್ಲ ವೆಚ್ಚವು 15 ಎಕರೆ ಭೂಮಿಯ ಆದಾಯದಿಂದ ನಡೆಯುತ್ತಿದ್ದು ಈ ಚಮತ್ಕಾರದ ಬಾವಿಯು ಈಗಲೂ ಕೂಡ ಸಾವಿರಾರು ಯಾತ್ರಿಕರ ದಾಹವನ್ನು ಜಾತ್ರೆವೇಳೆಯಲ್ಲಿ ತೀರಿಸುತ್ತದೆ ಅಂತೆ.

ಹೋಳಚಾರ ರಾಜ್ಯದ ರಾಜಸ್ವ ಮಂತ್ರಿ ರೂಪ ನಾನಕ ಚಂದ್ರ ಮುಂದಾಳು ತನದಲ್ಲಿ ಇಲ್ಲಿ ಜಾತ್ರೆ ಮಾಡುವ ರೂಢಿ ತಂದಿದ್ದು ಇಂದಿಗೆ 88 ವರ್ಷಗಳಾಯಿ ತೆನ್ನಲಾಗಿದೆ. ಈ ಜಾತ್ರೆಯು 1 ತಿಂಗಳ ತನಕ ಜರುಗುತ್ತಿದ್ದು ಸುತ್ತಲಿನ ಜನರೂ ಪಂಚಕ್ರೋಶಿಯಿಂದಲೂ ಬರುತ್ತಾರೆ. ಕೋರ್ಟು ಕಛೇರಿ ಆಸ್ಪತ್ರೆ ಸರಾಫ್ ಈ ಜಾತ್ರೆಯಲ್ಲಿ ಸಮಾವೇಶಗೊಳ್ಳುತ್ತವೆ. ಊರಿನಲ್ಲಿ ಒಂದು ಅಂಗಡಿ ತೆರೆಯುವದಿಲ್ಲ. ಒಂದು ಹಿಡಿ ಉಪ್ಪು ಬೇಕಾದರೂ ಜಾತ್ರೆಗೆ ಹೋಗಬೇಕು.

ನಿಧಾನವಾಗಿ ರಾಜ್ಯಗಳು ಕಳೆದು ಮುಖ ಮುದ್ರೆಗಳು ಬದಲಾವಣೆಗೊಂಡಿತು. ಊರಿನಿಂದ ನಗರವು ನಗರದಿಂದ ಪಟ್ಟಣವು ಆಯಿತು. ಆಧುನಿಕ ಸುಖಸೌಲಭ್ಯಗಳ ತುಸು ಕೊರತೆಯಿದ್ದರೂ ಶೀತಲಾಗುಡಿ ಗೋರಿ ಒಂದೆಡೆ ಇದ್ದು ಶಾಂತ ಸಂಕೇತ ವಾಗಿದೆ.

ದರ್ಗಾದ ೪ ಮಿನಾರ ಹಾಗೂ ಗುಮ್ಮಟನೊಡಿದಾಗ ತಾಜಮಹಲನ ನೆನಪು ಬರುತ್ತದೆ. ಹಿಂದು ಮುಸ್ಲಿಂ ಫಾರಸಿ ಕ್ರೈಸ್ತ ಜೆನರು ದರ್ಗಕ್ಕೆ ಬರುತ್ತಾರೆ. ಮನೋವಾಂಛಿತ ಪೂರ್ಣಗೊಂಡರೆ ಜಿಲೇಬಿ, ಲಾಡು, ಸಕ್ಕರೆ, ಬೆಲ್ಲ, ಕಡಬು ನೈವೇದ್ಯ ಪ್ರಸಾದ ಹಂಚುತ್ತಾರೆ. ಇತರ ದಿವಸಗಳಿಗಿಂತ ಗುರುವಾರ ಇಲ್ಲಿ ಕಿಕ್ಕಿರಿದ ಜನ-ಸ್ತೋಮ ಕಾಣಬಹುದು.

ಈ ಪರ್ವತದ ದಕ್ಷಿಣದತ್ತ ಶೀತಲಾ ಮಾತೆಯ ಮಂದಿರವಿದೆ. ಪ್ರತಿವರ ಚೈತ್ರ ಶುಕ್ಲ ಸಪ್ತಮಿಗೆ ದೇವಿಪೂಜೆ ವೈಭವದಿಂದ ನಡೆಯುತ್ತದೆ. ಶೀತಲಾ ಮಾತಾ ಎಂದರೆ ಶೀತತ್ವದ ದೇವಿ. ಪ್ರಖರ ಉಷ್ಣತೆಯಿಂದ ಉಳಿಯಲು ಮಳೆ ನೀರು ಕೊಟ್ಟು ಹೊಲ ಗದ್ದೆ ಹಸಿರಾಗಿಸಲು ಶೀತಲಾಮಾತೆಯನ್ನು ಪೂಜಿಸುತ್ತಾರೆ. ಕಳೆದ ೧೦ ವರಗಳಲ್ಲಿ ಉರಿನಜನರೆಲ್ಲ ಒಂದೆಡೆಗೆ ಸೇರಿ ಮಂದಿರದ ರೂಪವನ್ನು ಬದಲಾಯಿಸಿದ್ದಾರೆ. ಈ ತನಕ ಈ ಪರಿಸರದಲ್ಲಿ ಜಾತಿಯ ಮತಬೇಧ ಆಗುತ್ತಿಲ್ಲ. ಎರಡೂ ಮತದವರ ಮಂದಿರಗಳು ಒಂದೆಡೆ ಇದ್ದು ಸ್ನೇಹದಿಂದ ಬಾಳಿದ್ದಾರೆ. ಮಂದಿರ ಹಾಗೂ ದರ್ಗವನ್ನು ಕೂಡಿಸುವ ಮೆಟ್ಟಿಲುಗಳ ಕಾವಲುಗಾರಿಯನ್ನು ಓರ್ವ ಮುಸ್ಲಿಂ ಹೃಷಿತನು ಸ್ವವೆಚ್ಚ-ದಿಂದ ಮಾಡಿರುವನು. ಇಲ್ಲಿಯ ಮಂದಿರದ ಮೇಲೆ ಭಗವಾಧ್ವಜವು ಹಾಗೂ ದರ್ಗಾದ ಮೇಲೆ ಹಸಿರು ಧ್ವಜ ಹಾರಾಡುತ್ತಿದೆ.

ಒಟ್ಟಿನಲ್ಲಿ ಶೀತಲಾಮಾತೆಯು ಮಂದಿರ ಹಾಗೂ ದರ್ಗಾದ ಸ್ನೇಹಸೇತುವೆಯುಂತಿದೆ.

ಅನಂತ ಚಿಂತಾಮಣಿ ಜೋಯಿಷೀ
ಅಂಚೆ - ಬಿಣಗಾ - 581364,
ಕಾರವಾರ ತಾ॥ ಉತ್ತರಕನ್ನಡ.





## ಬಸವ ತತ್ತ್ವ ರತ್ನಾಕರ–26

### ವಚನ ಕಾವ್ಯ ಸುಧಾಸಾಗರ

### ಸುಖ–ದುಃಖಗಳ ವಿವೇಕ ನಿರ್ದೇಶ: 245

" ಮುಖಸ್ತುತಿ, ಮಾನ, ಸಿರಿ ಭೋಗಂಗಳು ಬಂದೊಡೆ,
ಅದುವೇ ಸುಖವೆಂಬರು ಲೋಕದ ಮಾನವರು ನೋಡಾ.
ಮುಖಭಂಗ, ಅಪಮಾನ, ಬಡತನ ಬಂದೊಡೆ,
ಅದುವೇ ದುಃಖವೆಂಬರು ಈ ಮರುಳರು ನೋಡಾ-
ಇಂತು ಸುಖ-ದುಃಖಗಳ ಕಲ್ಪಿಸಿ, ಕಳೆಯಲರಿಯದೆ
ಭವದಿ ಬಳಲುತಿಪ್ಪ ಮಾನವಂಗೆ ಮಾತ್ರ
ಪ್ರಾರಬ್ಧ, ಸಂಚಿತ, ಆಗಾಮಿ ಕರ್ಮತ್ರಯದ ಬಾಧೆ ನೋಡಾ !
ಬರ್ಪ ಸುಖ-ದುಃಖಂಗಳನು ಸಮಭಾವದಿಂ ಕಾಣುತಿಪ್ಪ
ನಿರ್ಲಿಪ್ತ ಸಹಜಭಕ್ತಂಗೆಲ್ಲಿಯದೊ ಈ ಕರ್ಮತ್ರಯದ
ಈ ಕಷ್ಟಸುಖಗಳಗಂಟು ಹೇಳಾ,
ಶ್ರೀ ಶೈಲ ಮಲ್ಲಿಕಾರ್ಜುನ ? "

### ತೀರ್ಥಕ್ಷೇತ್ರಗಳ ವಿಚಾರ : 246

" ಪರಮ ಪತಿವ್ರತೆಗೆಗಂಡನೊಬ್ಬನೆ ನೋಡಾ.
ಶರಣ ಸತಿ ಲಿಂಗಪತಿಯಾದ ಬಳಿಕ
ಕರದಿಷ್ಟಲಿಂಗ ಮಹಾದೇವನ ನಂಬಿ ನೆನೆವುದೆ ಚೆಂದ ನೋಡಾ-
ಗುರು ಕೊಟ್ಟ ಲಿಂಗವ ಕಿರಿದು ಮಾಡಿ
ಮರೆದು, ತೀರ್ಥಕ್ಷೇತ್ರಂಗಳ ಹಿರಿದು ಮಾಡಿ
ಹೋಗುತ್ತಿಪ್ಪವರ ಮುಖವ ನೋಡಲಾಗದು
ಹೇಳಾ ! ಶ್ರೀ ಶೈಲ ಮಲ್ಲಿಕಾರ್ಜುನ ! "

## ಅಗಣಿತ ವಚನ ರತ್ನಗಳ ರಾಶಿ : 247

“ ಪ್ರಭು ಬಸವಾದಿ ಪ್ರಮಥರನುಭಾವಸಾಗರದಾಳದಿಂ
ಹೊರದೆಗೆದಸಂಖ್ಯ ವಚನರತ್ನಗಳಿಂದು, ಸಹಸ್ರಕೋಟಿಗೂ
ಮಿಗಿಲೆನಿಸಿರ್ದು ಭವದ ಕೋಟಲೆಯಂ ಕಳೆಯುತ್ತೆ
ಹೊಸ ಬೆಳಕು ನೀಡುತ್ತೆ ಹೊಳೆಯುತ್ತಿಪ್ಪುವು ನೋಡಾ.
ಇಂತು ವಚನ ವಾಙ್ಮಯದಾ ವ್ಯಾಪ್ತಿಯ ಪಾರವಾಗಿರ್ಪುದನು
ಮೇಣ್ ಪ್ರಭುದೇವರೊರ್ವರೆ ‘ ಎರಡೆಂಬತ್ತು ಕೋಟಿ ವಚನಂಗಳನು–
ಹಾಡಿದೆ ’ ವೆಂದು ಉಲ್ಲೇಖಿಸಿರ್ಪುದನು ನೋಡಿರಯ್ಯಾ !
“ ಎರಡೆಂಬತ್ತು ಕೋಟಿ ವಚನವ ಹಾಡಿ ಹಲವ ಹಂಬಲಿಸಿತ್ತೆನ್ನ ಮನವು.
ಮನಘನವನರಿಯದು, ಘನ ಮನವನರಿಯದು.
ಗುಹೇಶ್ವರನೆಂಬ ಲಿಂಗವನರಿದ ಬಳಿಕ,
ಗೀತವೆಲ್ಲ ಒಂದು ಮಾತಿನೊಳಗು. ”
ಅಂತೆಯೇ ಸೊನ್ನಲಿಗೆ ಶಿವಯೋಗಿ ಸಿದ್ಧರಾಮಯ್ಯಗಳ ವಚನವಿಂತು :
“ ಅಲ್ಲಯ್ಯಗಳ ವಚನ ಎರಡೆಂಬತ್ತು ಕೋಟಿ-ಅಪ್ಪಯ್ಯಗಳ ವಚನ–
ನಾಲ್ಕು ಲಕ್ಷದ ಮೂವತ್ತಾರು ಸಾಸಿರ.
ಎಮ್ಮಯ್ಯಗಳ ವಚನ ವಚನಕ್ಕೊಂದು.
ನೀಲಮ್ಮನ ವಚನ ಲಕ್ಷದ ಹನ್ನೊಂದು ಸಾಸಿರ.
ಗಂಗಾಂಬಿಕ ವಚನ ಲಕ್ಷದ ಎಂಟು ಸಾಸಿರ.
ಎಮ್ಮಕ್ಕ ನಾಗಾಯಿಯ ವಚನ ಮೂರು ಲಕ್ಷದ ತೊಂಬತ್ತಾರು ಸಾಸಿರ.
ಮಡಿವಾಳಣ್ಣನ ವಚನ ಮೂರು ಕೋಟಿ ಮನ್ನೂರು.
ಹಡಪದಪ್ಪಯ್ಯಗಳ ವಚನ ಹನ್ನೊಂದು ಸಾಸಿರ
ಮರುಳಸಿದ್ಧನ ವಚನ ಅರವತ್ತೆಂಟು ಸಾಸಿರ
ಕಪಿಲಸಿದ್ಧ ಮಲ್ಲಿಕಾರ್ಜುನ ” ಇಂತೆಂದುದಾಗಿ.
ಕಲ್ಯಾಣಕ್ರಾಂತಿಯಾಗೆ, ಶಿವಶರರಣರು ವಚನ ಭಾಂಡಾರದಾ ಗ್ರಂಥಗಳನ್ನೆ
ತಮ್ಮ ಬೆನ್ನಿಂಗೆ ಕಟ್ಟಿಕೊಂಡು ಅವುಗಳನ್ನು ಪ್ರಾಣಕ್ಕಿಂತ ಹೆಚ್ಚಾಗಿ ಭಾವಿಸಿ
ರಕ್ಷಣೆಗೆಯ್ದಿಹರು ನೋಡಾ.
ಅಖಂಡ ಸಾಮ್ರಾಜ್ಯ ಸೈನ್ಯಕ್ಕೆದುರಾಗಿ ನಿಂದು ಹೋರಾಡಿದಾ
ಶಿವಶರಣರು ಅಂಥ ವಿಪ್ಲವ ಕಾರಕ ಪರಿಸ್ಥಿತಿಯಲ್ಲೂ ಮೇಣ್
ಕಾಲ ಗರ್ಭದೊಳಗಿಂದೀ ವಚನ ವಾಙ್ಮಯವನ್ನುಳಿಸಿಕೊಂಡು–
ಬಂದಿರ್ಪುದು ನಾಡಿನ ಮಾತ್ರವಲ್ಲ ಭಾರತದ ಅಂತೆಯೇ
ಇಡಿಯ ವಿಶ್ವಪ್ರಪಂಚದ ಪುಣ್ಯ ವಿಶೇಷ ಕಾಣಾ !
ಕಲಿಯುಗದ ಮಹಂತ ! ಶ್ರೀ ಶೈಲ ಮಲ್ಲಿಕಾರ್ಜುನ : ”



## ಸುಧಾ ಸಿಂಧು 248
### (ಶ್ರೀ ಬಸವಣ್ಣನವರನ್ನು ಕುರಿತು ಇತರ ಪ್ರಮಥರು)
### ಶ್ರೀ ಅಲ್ಲಮಪ್ರಭು ಸಂದೇಶ

ಆತ್ಮಗಂಗೆ : “ ತನುವ ದಾಸೋಹಕ್ಕೆ ಸವಿಸಿ,
ತನುವ ಗೆಲಿದ ನೋಡಾ ಬಸವಣ್ಣ !
ಮನವ ಲಿಂಗ ಧ್ಯಾನದಲ್ಲಿ ಸವಿಸಿ,
ಮನವ ಗೆಲಿದ ನೋಡಾ ಬಸವಣ್ಣ !
ಧನವ ಜಂಗಮದಲ್ಲಿ ಸವಿಸಿ,
ಧನವ ಗೆಲಿದ ನೋಡಾ ಬಸವಣ್ಣ !
ಧಾತ್ರೀತಲದೊಳಿಂತು ತನು-ಮನ-ಧನವ ಗೆಲಿದ
ಭಕ್ತಿ ಭಂಡಾರಿ ಮಹಾನುಭಾವಿ ಕಲ್ಯಾಣ ಬಸವಣ್ಣನಂತೆ
ಮತ್ತಾರನೂ ಕಾಣೆನೆಂದು–ಅಲ್ಲಮಪ್ರಭುವು
ಸಂಗನ ಬಸವಣ್ಣಂಗೆ ನಮೋ ನಮೋ ಎನುತಿರ್ದನು
ಕಾಣಾ, ಶ್ರೀ ಶೈಲ ಮಲ್ಲಿಕಾರ್ಜುನ ! ”

### ಶ್ರೀ ಬಸವೇಶ್ವರ ಸಂದೇಶ 249

ಭಕ್ತಿ ಗಂಗೆ : “ ಭಕ್ತಿಯೆಂಬ ಭೂಮಿಯ ಮೇಲೆ ಗುರುವೆಂಬ ಬೀಜ–
ಮೊಳಕೆಯೊಡೆದು ಲಂಗವೆಂಬ ಎಲೆಯಾಯಿತ್ತು ನೋಡಾ-
ಆ ಲಿಂಗವೆಂಬ ಎಲೆಯಮೇಲೆ ಸುವಿಚಾರವೆಂಬ ಕುಸುಮವಾಯಿತ್ತು ನೋಡಾ.
ಶಿವಾಚಾರವೆಂಬ ಫಲವಾಯಿತ್ತು ನೋಡಾ.
ವಿಶ್ರಾಂತಿ ಎಂಬುವ ಹಣ್ಣಾಯಿತ್ತು ನೋಡಾ.
ಆ ವಿಶ್ರಾಂತಿ ಎಂಬ ಹಣ್ಣು ತೊಟ್ಟು ಬಿಟ್ಟು ಕಳಚಿ ಬೀಳುವಲ್ಲಿ
ಕೂಡಲ ಸಂಗಮದೇವ ತನಗೆ ಬೇಕೆಂದು ಎತ್ತಿಕೊಂಡ ನೋಡಾ
ಇಂತು ಶ್ರೀ ಬಸವಣ್ಣನವರ ಭಕ್ತಿ ಸಂಪದ ವಾಣಿ
ಕೇಳಾ, ಶ್ರೀ ಶೈಲ ಮಲ್ಲಿಕಾರ್ಜುನ. ”

## ಶ್ರೀ ಚನ್ನಬಸವೇಶ್ವರ ಸಂದೇಶ: 250

ಜ್ಞಾನಗಂಗೆ: " ಪರಶಿವನಾಗ್ರಹದಾ ಬೆಸನಮಂ ಗುರುನಿರೂಪಮೆನೆ ಕೈಗೊಂಡು ನಿಲಡೆ
ಕರುಣಾಸಿಂಧು ಬಸವಣ್ಣ ಕೈಲಾಸದಿಂ ಸಂತಸಗೊಂಡುರೆ
ಗುರುಲಿಂಗ ಜಂಗಮಕೆ ಭಕ್ತಿಯಂ ಸಲ್ಲಿಸಲೆಂದು ಭರದಿ ತಾ-
ಏಳುನೂರೆಪ್ಪತ್ತು ಅಮರ ಗಣಂಗಳೊಡವೆರೆದು ಮರ್ತ್ಯ ಲೋಕಕ್ಕೈತಂದನಯ್ಯಾ !
ಶಿವ ಸಮಯಕಾಧಾರವಾದನಯ್ಯಾ ಬಸವಣ್ಣನು,
ಭುವನಾದಿ ಭುವನಂಗಳಿಗೆ ಪರಮ ಗುರುವಾದನಯ್ಯಾ ಬಸವಣ್ಣನು,
ಜಡರುಗಳ ಮನದ ತಮವ ಕಳೆಯಲೆಂದು,
ಗಡನೆ ರಚನೆಗೊಂಡಿತ್ತು ಕಲ್ಯಾಣದಲಿ ಮಹಾಮಠವೊಂದು
ಪರಮನಟ್ಟಿದ ಓಲೆ ಬಂದಿಳಿಯಿತ್ತು ಬಿಜ್ಜಳನ ಸಿಂಹಾಸನದ ಮುಂದೆ,
ಹರಲಿಪಿಯದ ತಂದು ಓದಿದಡೆ, ಸೃಷ್ಟಿಯ ಸೇನಬೋವರಿಗೆ ತಿಳಿಯದ.
ಛಪ್ಪನ್ನ ದೇಶದ ಬಾಷೆಯ ಲಿಪಿ ಮುನ್ನವಲ್ಲ.
ಒಪ್ಪುವ ವೋಲ್ ಇದನೋದಿದವರ್ಗೆ ಆನೆ, ಸೇನೆ, ಕುದುರೆ, ಭಂಡಾರ,
ಅರುವತ್ತಾರು ಕರಣಿಕರ್ಗೆ ಮುಖ್ಯನ ಮಾಡುವೆನೆಂದು
ಒರೆದು ಬಿಜ್ಜಳನು ಭಾಷೆಯಂ ಕೊಡುತಿರಲು;
ಹರನಿರೂಪವ ಶಿರನ ಮೇಲಿಟ್ಟು ಶಿವಶರಣೆಂದು, ಪರಮಜ್ಞಾನಿ ಬಸವಣ್ಣನೋದಿ
ಮೆಟ್ಟಿ ತೆಗೆಸಿದನಯ್ಯಾ, ಅರುವತ್ತಾರು ಕೋಟಿ ವಸ್ತುವ ಅರಮನೆಗೆ, ರಾಜ್ಯಕ್ಕೆ ಮೇಣ್
ಅರಮನೆಗೆ ಒಡೆಯನಾ, ಹರಗಣಂಗಳಿಗೆ ಚೈತನ್ಯನಾಗಿ
ಕೂಡಲ ಚನ್ನ ಸಂಗಯ್ಯನಲ್ಲಿ
ಅಂಡಜದೊಳಗಿದ್ದು
ಶಿವನ ಭಂಡಾರಿಯಾದನಯ್ಯಾ,
ಎನ್ನ ತಂದೆ ಪೂರ್ವಾಚಾರಿ
ಸಂಗನ ಬಸವಣ್ಣನು-
ಎಂಬೀ ವಚನಾಮೃತ
ಜ್ಞಾನ ನಿಧಿ ಚನ್ನಬಸವಣ್ಣನವರ
ದಿವ್ಯ ಬೋಧಾಮೃತ ಸವಿಯ ಬಾರಾ
ಶ್ರೀ ಶೈಲ ಮಲ್ಲಿಕಾರ್ಜುನ.

ಸಿದ್ಧಗಂಗಾ



## ಶ್ರೀ ಸಿದ್ಧರಾಮೇಶ್ವರ ಸಂದೇಶ: 251

ಯೋಗ ಗಂಗೆ: " ಲೋಕ ಲೌಕಿಕಂಗಳೆಲ್ಲರು ನೀವು ಚೆನ್ನಾಗಿ ಕೇಳಿಯಿರಯ್ಯಾ.
ಏಕೈಕ ರುದ್ರನ ಅವತಾರವನು ಅರಿದೆವೆಂಬಿರಯ್ಯಾ!
ನೋಡಿ ನಂಬಿರಯ್ಯಾ ! ಶಿವನ:
ಶಿವನು ಬಸವಣ್ಣನಾದ ನೋಡಿರಯ್ಯಾ!
ಬಸವಣ್ಣ ಗುರುವಾದ ನೋಡಿರಯ್ಯಾ !
ಬಸವಣ್ಣ ಲಿಂಗವಾದ ನೋಡಿರಯ್ಯಾ !
ಬಸವಣ್ಣ ಜಂಗಮವಾದ ನೋಡಿರಯ್ಯಾ !
ಬಸವಣ್ಣ ಪರಿಣಾಮ ಪ್ರಸನ್ನ ಪರವಾದ ನೋಡಿರಯ್ಯಾ !
ಬಸವಣ್ಣ ಮೂಲ ತ್ರಯವಾದ ನೋಡಿರಯ್ಯಾ !
ಬಸವಣ್ಣ ಭಕ್ತಿ ಎರಡು ತ್ರಯವಾದ ನೋಡಿರಯ್ಯಾ !
ಬಸವಣ್ಣ ಆರಾರರಿಂ ಮೇಲೆ ತೋರಿದ ನೋಡಿರಯ್ಯಾ !
ಕಪಿಲ ಸಿದ್ಧ ಮಲ್ಲಿಕಾರ್ಜುನಯ್ಯಾ, ಕೇಳಯ್ಯಾ !
ಬಸವಣ್ಣನ ಪ್ರಸಾದವ ಕೊಂಡು ಭವಂ ನಾಸ್ತಿಯಾದೆನಯ್ಯಾ !
ರಸಪಾಕ ಈ ವಚನಾಮೃತ ಶ್ರೀ ಸಿದ್ಧರಾಮ ಶಿವಯೋಗಿ
ಜ್ಞಾನಾಮೃತ
ಕುಡಿದು ತೃಪ್ತಿವಡೆಯ ಬಾರಾ
ಶ್ರೀ ಶೈಲ ಮಲ್ಲಿಕಾರ್ಜುನ ! "

## ಶ್ರೀ ಮಹಾದೇವಿಯಕ್ಕನ ಸಂದೇಶ: 252

ವೈರಾಗ್ಯಗಂಗೆ " ಆದಿ ಅನಾದಿಯಿಂದತ್ತತ್ತ ನೋಡಿರಯ್ಯಾ ಬಸವಣ್ಣನು.
ಮೂದೇವರ ಮೂಲಸ್ಥಾನ ನೋಡಿರಯ್ಯಾ ಬಸವಣ್ಣನು
ನಾದ-ಬಿಂದು-ಕಳಾತೀತ ಆದಿನಿರಂಜನ ನೋಡಿರಯ್ಯಾ ಬಸವಣ್ಣನು.
ಆದ ನಾದ ಸ್ವರೂಪವೆ ಬಸವಣ್ಣನಾದ ಕಾರಣ ಆ ಬಸವಣ್ಣನ ಶ್ರೀ ಪಾದಕ್ಕೆ-
ನಮೋ ನಮೋ ಎನ್ನುತಿರ್ದೆನು ಕಾಣಾ, ಚೆನ್ನಮಲ್ಲಿಕಾರ್ಜುನಯ್ಯಾ-
ಇಂತೀ ವಚನಾಮೃತ ವೈರಾಗ್ಯ ನಿಧಿ ತತ್ತ್ವ ಶಿಖಾಮಣಿ,
ಕಾಲ-ಕರ್ಮ-ಮಾಯೆಗಳನು ಜಯಿಸಿನಿಂದ ಪರಾಶಕ್ತಿ ರೂಪಿಣಿ,
ಶ್ರೀ ಮಹಾದೇವಿಯಕ್ಕಗಳಾ ಅನುಭವಾಮೃತ !
ಸಂತ ಶಿವಶರಣ ಮಹಂತರಿಗೆ ಪಂಚಾಮೃತ ! ಪ್ರಮಥಗಣ ತಿಂಥಿಣಿಗೆ ಪ್ರಸಾದಾಮೃತ!
ದಿವ್ಯಗುಣಸಾಂದ್ರ ! ಸಂತಸ ಸಾಗರ ಪರಾತ್ಪರ ಸುಖ ಶಾಂತಿಯ ಪಾರ ಸಮುದ್ರ !
ಭವ್ಯ ಗಿರೀಶ ಚಂದ್ರ ! ಸವಿಯ ಬಾರಾ ಕರುಣಾಕರಾ ! ಶಿವ ತತ್ತ್ವ ರತ್ನ ಶ್ರೀ ಕರಾ !
ಭವಹರಾ ! ಮಹಾಂತ ಮಹಿಮಾಗಾರ ಶ್ರೀ ಶೈಲ ಮಲ್ಲಿಕಾರ್ಜುನ ! "

---

ಶ್ರೀ ನೊಟಗಿ ಮಲ್ಲಿಕಾರ್ಜುನ, " ಕನ್ನಡ ಕವಿಕಾಳಿದಾಸ " ಅಥಣಿ-591304
ಬೆಳಗಾವಿ ಜಿಲ್ಲೆ

ಲಕ್ಷಾಂತರ ರೂಪಾಯಿಗಳಿರಬಹುದು. ಆದರೆ ಈ ಮೂರು ಸಾವಿರ ರೂಪಾಯಿಗಳಲ್ಲಿ ಒಂದು ಸಾವಿರವನ್ನು ಒಬ್ಬ ಬಡವಿದ್ಯಾರ್ಥಿಯ ವಿದ್ಯಾಭ್ಯಾಸ ಪೂರೈಕೆಗಾಗಿ ನೀಡಿದೆ. ಅವನೀಗ ಕಲಿತು ದೊಡ್ಡ ಅಧಿಕಾರಿಯಾಗಿದ್ದಾನೆ. ಮದುವೆಯ ಭಾಗ್ಯವಿಲ್ಲದೆ ನಿರಾಶಳಾಗಿದ್ದ ಬಡ ತರುಣಿಯೊಬ್ಬಳ ಮದುವೆಗೆ ಒಂದು ಸಾವಿರವನ್ನು ನೀಡಿ ಸುಖಜೀವನ ಕಲ್ಪಿಸಿಕೊಟ್ಟೆ. ಬಡ ಕುಟುಂಬವೊಂದರ ಯಜಮಾನ ವ್ಯಾಧಿಗ್ರಸ್ಥನಾಗಿ ಸಾವಿನ ಅಂಚಿನಲ್ಲಿದ್ದ. ಅವನ ಚಿಕಿತ್ಸೆಗೆ ಇನ್ನುಳಿದ ಹಣ ನೀಡಿ ಸಂಸಾರವನ್ನು ದುಃಖದಿಂದ ಪಾರುಗೊಳಿಸಿದೆ. ಈ ಪುಣ್ಯಕಾರ್ಯಗಳಿಗೆ ವ್ಯಯಿಸಿದ ಹಣ ನನ್ನ ಅವಿಭಾಜ್ಯ ಸಂಪತ್ತು. ಆದ್ದರಿಂದ ಅದನ್ನು ಮಾತ್ರ ಹೇಳಿದೆ' ಎಂದು ವಿವರಿಸಿದ. ಸಾಧು ರಾಮಾನಂದರು ಅವನ ಮನೆಗೆ ಭೋಜನಕ್ಕಾಗಿ ತೆರಳಿದರು.

ಹೀಗೆ ನಾವು ನಮ್ಮ ಬದುಕಿನ ಕೆಲವು ಕ್ಷಣಗಳನ್ನಾದರೂ ಸತ್ಸಂಗ, ಪರೋಪಕಾರ, ದೇವತಾರಾಧನೆಗಳಿಗೆ ಬಳಸಿದರೆ ನಮ್ಮ ಪುಣ್ಯದ ಖಾತೆಯಲ್ಲಿ ನಮೂದಿಸಲ್ಪಡುವ ಅಮೂಲ್ಯ ದಿನಗಳು ಅವು ಆಗಿರುತ್ತವೆ. ಗಳಿಕೆಯನ್ನೆಲ್ಲ ಕೂಡಿಡುವುದು ಅರ್ಥಹೀನ. ನಮ್ಮ ದುಡಿಮೆಯ ಫಲದಿಂದ ಕಿಂಚಿತ್ತಾದರೂ ಅಸಹಾಯರಿಗೆ ನೆರವಾದರೆ ಆ ಪುಣ್ಯ ಇನ್ನೊಂದು ಸಂಕಟಕಾಲದಲ್ಲಿ ಏನಾದರೂ ಒಂದು ರೀತಿಯಲ್ಲಿ ನಮ್ಮ ಸಹಾಯಕ್ಕೆ ಬಾರದೆ ಇರುವುದಿಲ್ಲ. ಇನ್ನೊಬ್ಬರಿಗೆ ನಮ್ಮಿಂದಾಗಿ ಹಿತವುಂಟಾದರೆ ಅದು ಜೀವಿತದ ಸುಂದರವಾದ, ಸುಖದ ಕ್ಷಣಗಳು. ಈ ಸುಖದಿಂದ ವಂಚಿತರಾಗದೆ ನಮ್ಮ ಜೀವನ ಮತ್ತು ಸಾಧನೆಯನ್ನು ಒಂದಿಷ್ಟಾದರೂ ಸದುಪಯೋಗ ಮಾಡಿಕೊಳ್ಳಲು ಪ್ರಯತ್ನಿಸೋಣ. ●

---

ಪ. ರಾಮಕೃಷ್ಣಶಾಸ್ತ್ರಿ
ಶಿವಶಕ್ತಿ ನಿಲಯ, ಪುಚ್ಚಿನ, ದ.ಕ - 574295.





# ಸಂಪೂರ್ಣ ಮಾನವನಾಗುವ ಬಗೆ

ಹೆಚ್ಚು ಮಾತನಾಡುವುದನ್ನು ನಾವು ಮೊದಲು ಬಿಡಬೇಕು. ಒಂದೇ ಸಮ ಮಾತನಾಡುತ್ತಿದ್ದರೆ ಬೇರೆಯವರು ಹೇಳುವುದನ್ನು ನಾವು ಗ್ರಹಿಸಲಾಗುವುದಿಲ್ಲ. ನಮ್ಮೊಂದಿಗೆ ಮಾತನಾಡುತ್ತಿರುವ ವ್ಯಕ್ತಿಗೆ, ಆತ ಹೇಳುತ್ತಿರುವುದನ್ನು ನಾವು ಕೇಳಲು ಆಸಕ್ತಿ ವಹಿಸುತ್ತಿದ್ದೇವೆ. ಎನ್ನುವುದನ್ನು ತೋರಿಸಬೇಕು. ಅಲ್ಲದೆ ತಾಳ್ಮೆ ಇರಬೇಕು. 'ವಾದ ಮತ್ತು ಟೀಕೆಗಳಲ್ಲಿ ಹೆಚ್ಚು ಸಮಯವನ್ನು ವ್ಯರ್ಥ ಮಾಡದೆ; ಹಗುರವಾಗಿ ಅವುಗಳನ್ನು ತೆಗೆದುಕೊಳ್ಳಬೇಕು. ಕಾರಣ 'ವಾದ ಮಾಡಿ ನಾವುಗೆದ್ದರೂ, ಸೋತಂತೆಯೇ' ಎನ್ನುವುದನ್ನು ನಾವು ಮರೆಯಬಾರದು.

ನಮ್ಮ 'ಆಸಕ್ತಿ'ಯನ್ನು ತೋರ್ಪಡಿಸಲು ನಮ್ಮೊಂದಿಗೆ ಮಾತನಾಡುತ್ತಿರುವ ವ್ಯಕ್ತಿಗೆ ವಿಷಯದ ಬಗ್ಗೆ ಪ್ರಶ್ನಿಸಿ; ಉತ್ತರ ಪಡೆಯಬೇಕು.

'ಪ್ರಕೃತಿ' ನಮಗೆ ಎರಡು ಕಿವಿಗಳನ್ನು ಕೊಟ್ಟಿದೆ. ಆದರೆ ಒಂದೇ ಒಂದು ನಾಲಿಗೆಯನ್ನು ದಯಪಾಲಿಸಿದೆ. ಅದೊಂದು 'ನ್ಯಾಯಬದ್ಧ' ಕೊಡುಗೆಯೆಂದೇ ನಾವು ತಿಳಿಯಬೇಕು. ಅಂದರೆ ನಾವು ಮಾತನಾಡುವುದಕ್ಕಿಂತ ಹೆಚ್ಚಾಗಿ ಬೇರೆಯವರು ಹೇಳಿದ್ದನ್ನು ಕೇಳಬೇಕೆಂದು ಅದರ ಅರ್ಥ.

'ಕೇಳಬೇಕಾದರೆ ಎರಡು ಕಿವಿಗಳು ಅವಶ್ಯಕ. ಒಂದು ನಾವು ಕೇಳಿದ್ದನ್ನು ಅರ್ಥೈಸಲು, ಮತ್ತೊಂದು ಕೇಳಿದ್ದನ್ನು ಅನುಭವಿಸಲು.

ಬೇರೆಯವರು ಹೇಳಿದ್ದನ್ನು ಯಾರು ಸರಿಯಾಗಿ ಕೇಳುವುದಿಲ್ಲವೋ' ಅವರಿಗೆ ನಿಜವಾದ ನಿರ್ಣಯಕ್ಕೆ ಬರಲು ವಿಷಯಗಳ ಕೊರತೆಯುಂಟಾಗುವುದು. ಅಂದರೆ 'ಕಡಿಮೆ ಮಾತನಾಡಿ, ಬೇರೆಯವರು ಹೇಳುವುದನ್ನು ನಾವು ಹೆಚ್ಚು ಹೆಚ್ಚು ಕೇಳುವುದರಿಂದ ಸಂಪೂರ್ಣ ಮಾನವರಾಗಬಹುದು.

'ಸರ್ವಜ್ಞ' ಮಹಾಕವಿಯು; ತಾನು ಹೇಗೆ ಸರ್ವಜ್ಞನಾದನು; ಎಂಬುದರ ಬಗ್ಗೆ ಈ ರೀತಿ ಹೇಳಿದ್ದಾನೆ.

ಸರ್ವಜ್ಞ ನೆಂಬುವನು
ಗರ್ವದಿಂದಾದವನೇ ?
ಸರ್ವರೋಳ್ ಒಂದೊಂದು ನುಡಿಗಲಿತು
ವಿದ್ಯದಾ ಪರ್ವತವೇ ಆದ..............

ಅಂದರೆ; ಮೇದಾವಿಗಳೊಡನಾಡಿ; ಅವರಿಂದ ಒಂದೊಂದು ನುಡಿಗಲಿತು 'ವಿದ್ಯದಾಪರ್ವತವೇ' ತಾನಾದೆನೆಂದು ಆ ಮಹಾನ್ ಕವಿ ಹೇಳಿಕೊಂಡಿದ್ದಾನೆ.

ಅಂದರೆ; ಅನೇಕ ನದಿಗಳು ಸೇರಿದಾಗ ಸಮುದ್ರವಾಗುತ್ತದೆ; ಅದೇ ರೀತಿ ಪುಸ್ತಕಗಳನ್ನು ಓದುವುದರ ಮೂಲಕ; ಪಂಡಿತ ಪಾಮರರು ಹೇಳುವುದನ್ನು ಕೇಳುವುದರ ಮೂಲಕ ನಾವು ಜ್ಞಾನ ಸಂಪತ್ತನ್ನು ಪಡೆಯಬಹುದು.

'Empty vessels make much noise' ಎನ್ನುವ ಆಂಗ್ಲ ಗಾದೆಯಂತೆ., ನಾವು ಹೆಚ್ಚು ಮಾತನಾಡುವುದರಿಂದ, ನಾವು ಖಾಲಿ ಪಾತ್ರೆಗಳೆಂದು., ಇತರರು ಬೇಗ ಅಳೆದು ಬಿಡುವರು. Let noble thoughts come from all sides ಎನ್ನುವಂತೆ., ಬುದ್ಧಿವಂತರು, ಮತ್ತು ಹಿರಿಯರು ಹೇಳಿದ್ದನ್ನು ಗ್ರಹಿಸುವ ಹುಮ್ಮಸ್ಸು ಮತ್ತು ಆಸಕ್ತಿಯನ್ನು ಬೆಳಸಿಕೊಂಡಾಗ ಮಾತ್ರ ಪರಿಪೂರ್ಣತೆಯನ್ನು ಪಡೆಯಲು ಸಾಧ್ಯ. ●

---

ಎಚ್. ಗೆನಿಸಿದ್ಧಯ್ಯ, ಸಹಶಿಕ್ಷಕರು, ರೂರಲ್ ಹೈಸ್ಕೂಲ್, ಆವತಿ,ದೇವನಹಳ್ಳಿ ತಾ.

**ಮನುಷ್ಯ**

ಹಾಸಿಗಿದ್ದಷ್ಟು ಕಾಲು ಚಾಚೆಂದು
ಮನುಷ್ಯ-ಮನುಷ್ಯನಿಗೆ ನೀಡಿದ ಸಂದೇಶ;
ಮನುಷ್ಯ ಈ ಜಗದ ಹಾಸಿಗೆಗಿಂತ
ದೊಡ್ಡವನೆಂದು ಹೇಳುವ ತಾತ್ಪರ್ಯ:
ಆದರೂ-
ಪ್ರತಿಭೆಯನ್ನು ಅದುಮಿಟ್ಟುಕೊಂಡು ಎಲೆಮರೆಯ ಕಾಯಿಯಂತೆ
ಮಲಗಿ ಎಚ್ಚೆತ್ತು ಮಲಗಿ ಹೋಗುವವನು ಬದುಕಿರುವವರೆಗೆ.

**ಮಾಧ್ಯಮ**

ಅಪರಿಚಿತರ ಸಮೂಹದಲ್ಲಿ ಮೌನವೇ ಗಾಂಭೀರ್ಯ.
ಪರಿಚಿತರ ಸಮೂಹದಲ್ಲಿ ಭಾವವೇ ಗಾಂಭೀರ್ಯ.

**ಜೀವನ**

ಗತಿಕರು ಸುಖವನರಸುವರು;
ನಿರ್ಗತಿಕರು ಆನಂದವನರಸುವರು.

ದುಡಿಮೆ ಪ್ರತಿಫಲದ ಪ್ರತಿಬಿಂಬ
ಸಾಧನೆ ದುಡಿಮೆಯು ಜೀವಜಂತು.

**ಭಾವಜ್ಞ, ಜಮಖಂಡಿ ವಿಜಾಪುರ ಜಿಲ್ಲೆ.** (ಎ. ಟಿ. ಕೋರಟಕರ)



# ಮಾಯೇ....ಒಂದು ಶೋಧ........!

ಶಂಕರಾಚಾರ್ಯರ ಅದ್ವೈತವನ್ನು ತೆರೆದು ನೋಡಿದಾಗ 'ಮಾಯೆ' ಎಂಬ ಶಬ್ದ ಹೇರಳವಾಗಿ ಕಾಣಸಿಗುತ್ತದೆ. 'ಅಹಂ ಬ್ರಹ್ಮಾಸ್ಮಿ' ಜಗತ್ತು ಮಿಥ್ಯಂ....ಮಾಯೆ ಎಂದು ಅದ್ವೈತವಾದವನ್ನು ನಿರೂಪಿಸುತ್ತಾರೆ. ಹಾಗಾದರೆ ಜಗತ್ತು ಮಿಥ್ಯವಾದರೆ ವ್ಯಕ್ತಿ ಬದುಕುತ್ತಿರುವುದು ಮಿಥ್ಯವೇ...? ದಿನಬೆಳಗಾದರೆ ವ್ಯಕ್ತಿ ಬದುಕಲು ಹೋರಾಡುತ್ತಿದ್ದಾನೆ. ಜಗತ್ತಿನ ಪ್ರತಿ ವಸ್ತುಗಳ ಸಂಪರ್ಕ ಹೊಂದಿ ಅದರ ಉಪಯೋಗ ಪಡೆದುಕೊಳ್ಳುತ್ತಿದ್ದಾನೆ. ಉಪಯೋಗ ಎಷ್ಟರಮಟ್ಟಿಗೆ ಅಂದರೆ ವ್ಯಕ್ತಿ ತನ್ನ ಇರುವನ್ನೆ ಮರೆಯುವಷ್ಟು! ಜೀವನವಿಡೀ ಹಣ ಗಳಿಸುವುದೇ ಮುಖ್ಯ ಕಾರ್ಯವಾಗಿ, ಮಾನವೀಯ ಮೌಲ್ಯಗಳು ನಶಿಸಿ, ಗಳಿಸಿದ್ದು ಅನುಭವಿಸಲು ಶಕ್ತನಾಗದೇ ಒಂದು ದಿನ ಸಾವನ್ನಪ್ಪಿಕೊಳ್ಳುತ್ತಾನೆ ಈ ಮಧ್ಯದ ಬದುಕು ಕೇವಲ ಜಗತ್ತಿನ ವಸ್ತುಗಳನ್ನು ಕೂಡಿಡುವುದರಲ್ಲಿಯೇ ಕಳೆದು ಬಿಡುತ್ತಾನೆ. ಇದು ಸಾವಿನಿಂದಾಗಿ ಅರ್ಥವಾಗದ ಭಯದಲ್ಲಿ ಬದುಕುತ್ತಾನೆ. ಜೀವನ ತಿಳಿಯಬೇಕಾದರೆ ಸಾವನ್ನು ಅರ್ಥಮಾಡಿಕೊಳ್ಳಬೇಕು. ಸಾವೇ ನಿಜವಾದದ್ದು. ಅದನ್ನು ನಗ್ನರೂಪದಲ್ಲಿ ಸಾಕಾರ ಮಾಡಿಕೊಳ್ಳಬೇಕು. ರೋಗದ, ಮುಪ್ಪಿನ, ಸಾವಿನ ಕಲ್ಪನೆ ಇಲ್ಲದವರಿಗೆ 'ಮಾಯೆ' ಆವರಿಸಿಕೊಳ್ಳುತ್ತದೆ. ಮನದ ಮುಂದಣ ಆಸೆಯೇ ಮಾಯೆ ಎಂದು ಅಲ್ಲಮ ಪ್ರಭು ಹೇಳಿದ್ದು ಬದುಕಿನ 'ನಿಗೂಢತೆಯನ್ನು ಸ್ಪಷ್ಟ' ಪಡಿಸಿದಂತಿದೆ.

'ಮಾಯೆ'-ಅಂದರೆ ಮನಸ್ಸನ್ನು ಆಕರ್ಷಿಸುವುದು ಇಲ್ಲವೆ ಇದ್ದು ಇಲ್ಲದಂತಿರುವ ವಸ್ತುಗಳು ಎನ್ನಬಹುದು. ಮೂಲವಾಗಿ ಹೆಣ್ಣು, ಹೊನ್ನು, ಮಣ್ಣು ಈ ಮೂರನ್ನು ಮಾಯೆ ಎಂಬ ಹೆಸರಿನಲ್ಲಿ ಕರೆಯಲಾಗುತ್ತದೆ. ವ್ಯಕ್ತಿಗೆ ಮೋಹ ಕವಿಯಿತೆಂದರೆ ಅದನ್ನು ಪಡೆಯಲು ಶಕ್ತಿಮೀರಿ ಹವಣಿಸುತ್ತಾನೆ. ಅದನ್ನು ಪಡೆಯುವುದೇ ಬದುಕು ಜೀವನದ ಗುರಿ ಎಂದು ನಂಬಿ ಬಿಡುತ್ತಾನೆ. ಉದಾ: ಹೆಣ್ಣು, ಸುಂದರ ಹೆಣ್ಣು ಒಮ್ಮೆ ಮನಸ್ಸಿನಲ್ಲಿ ನಾಟಿಕೊಂಡರೆ ಅವಳನ್ನು ಜೀವನಸಂಗಾತಿಯನ್ನಾಗಿ ಮಾಡಿಕೊಳ್ಳಲು ಹೋರಾಡುತ್ತಾನೆ. ಮೊದಲ ನೋಟಕ್ಕೆ ಸೆಳೆದ ಅವಳ ಸೌಂದರ್ಯ ನಂತರ ಎಲ್ಲಿ ಎಂದು ಹುಡುಕಾಡಿ ಸೋಲುತ್ತಾನೆ. ಅವಳ ಅಸಭ್ಯ ವರ್ತನೆ ಪ್ರಬಲಗೊಂಡಾಗ ಸೌಂದರ್ಯ ಕೇವಲ ಚರ್ಮದಲ್ಲಿಲ್ಲ ಎಂದು ನಂತರ ತಡವಾಗಿ ಅರಿವು ಮಾಡಿಕೊಳ್ಳುತ್ತಾನೆ. ಅವಳನ್ನು ಪಡೆಯಲು ಹೋರಾಡಿದ ದಿನಗಳು, ಶಕ್ತಿ, ಎಲ್ಲವು ವ್ಯಯವಾಗಿದ್ದು ಅರ್ಥಹೀನ ಎಂದು ಅರಿವಿಗೆ ಬಂದಾಗ ಹೆಣ್ಣು ಬಾಹ್ಯವಸ್ತುವಾಗಿ 'ಮಾಯೆ' ಎಂದು ಕರೆಸಿಕೊಳ್ಳುತ್ತದೆ. ಹೆಣ್ಣೆಗಾಗಿ ಗಂಡಿನಲ್ಲಿ ಹೊಯ್ದಾಟ-ಇದು ಕೇವಲ ಪಂಚೇಂದ್ರಿಯಗಳ ಸ್ವಾಭಾವಿಕ ಕ್ರಿಯೆ. ಇದಕ್ಕೆ ವ್ಯಕ್ತಿ ಗುಲಾಮನಾಗಿ ಬಿಡುತ್ತಾನೆ. ಮೆದುಳಿ-

ನಿಂದ ಹೊರಚಾಚಿಕೊಂಡ ಇಂದ್ರಿಯಗಳು ತಮ್ಮ ಹಸಿವ ಹಿಂಗಿಸಿಕೊಳ್ಳಲು ಹವಣಿಸುತ್ತವೆ. ಇವುಗಳ ಹಸಿವಿಗೆ ಅಂತ್ಯವಿಲ್ಲ. ಜನ್ಮ ಜನ್ಮಾಂತರದ ದಾಹ ಇವು-ಗಳಿಗೆ ಮೂಲದಲ್ಲಿ ಐಕ್ಯವಾಗುವವರೆಗೆ ಯಾವ ವಸ್ತುವಿಗೂ ಕೊನೆ ಇಲ್ಲ.

ಹೆಣ್ಣಿನ ಸೌಂದರ್ಯ ಸವಿಯಲು, ಕಾಣಲು ಕಣ್ಣು ಬಯಸುವುದು ಪ್ರಕೃತಿಯ ನಿಯಮ ಗಂಡಸು ಇದಕ್ಕೆ ಮಣಿದು ಸವಿಯಲು ಹೋರಾಡುತ್ತಾನೆ ಅಡೆ ತಡೆಯಾದ ವಿಪತ್ತುಗಳನ್ನು ಎದುರಿಸಿ ಅವಳನ್ನು ಪಡೆಯಲು ಹೋರಾಡುತ್ತಾನೆ. ಪ್ರತಿಫಲ ಇಷ್ಟೇ ಅವಳಿಂದ ತನ್ನ ಶಕ್ತಿಯನ್ನು ಕಳೆದುಕೊಳ್ಳುತ್ತಾನೆ. ಇಂದ್ರಿಯದ ಮೂಲಗುಣವಾದ ಅತೃಪ್ತಿಯನ್ನು ಕೊನೆಗೊಳಿಸುವ ಭ್ರಮೆಯಲ್ಲಿಯೇ ಹೋರಾಡಿದ್ದು ವ್ಯರ್ಥ ಎಂದು ತಿಳಿದಾಗ ಸಾವಿನ ಕರಾಳಛಾಯೆ ಆವರಿಸಿಕೊಂಡಿರುತ್ತದೆ. ಹೊರ ಹೋಗಲು ಯತ್ನಿಸುವ ಶಕ್ತಿಯನ್ನು ಒಂದೇ ಒಂದು ಕ್ಷಣ ತಡೆ ಹಿಡಿದು ಅನುಭವಿಸಿದರೆ ಅದು ಸಾರ್ಥಕ. ತಡೆ ಹಿಡಿಯುವುದೆಂದರೆ ಇನ್ನೊಂದು ಅರ್ಥದಲ್ಲಿ ನಮ್ಮಲ್ಲಿಯೇ ಅವಿತು ಕೊಂಡು ಅವಲೋಕಿಸುತ್ತಿರುವ ಪ್ರಜ್ಞೆಗೆ ಅರ್ಪಿಸಿಬಿಡುವುದು ..!

ಒಂದು ಮಾತು ನಿಜ: ಮಾಯೆ ಕಲ್ಪನೆಯು ಪುರುಷಾರ್ಥ ಪ್ರಯತ್ನಕ್ಕೆ ಕಡಿವಾಣ ಹಾಕುತ್ತದೆ. ವ್ಯಕ್ತಿ ಪಲಾಯನವಾದಿಯಾಗಬಹುದು. ಇಲ್ಲವೆ ಆಲಸಿ ಯಾಗಬಹುದು. ಆದರೆ ಶಂಕರಾಚಾರ್ಯರ 'ಮಾಯೆ' ಅರ್ಥವಂತು ಇದಲ್ಲ. ತನ್ನ ಅವಶ್ಯಕತೆಗೆ ಮೀರಿ ಇನ್ನೊಬ್ಬರ ಮನಸ್ಸನ್ನು ನೋಯಿಸಿ ಬಲಾತ್ಕಾರವಾಗಿ ಸಂಗ್ರಹಿಸುವ ಮಾನಸಿಕ ಗುಣಧರ್ಮ ಸಲ್ಲದು ಎಂಬ ಅರ್ಥದಲ್ಲಿ 'ಮಾಯೆ' ಯನ್ನು ತಂದೊಡ್ಡಲಾಗಿದೆ.

ವಸ್ತು ಸ್ಥಿತಿಯನ್ನು ಅದರ ಇತಿಮಿತಿಗಳ ಪರಿಚಯವಿಲ್ಲದೆ ಮೆದುಳಿನ ಮುಖಾಂತರ ಬಣ್ಣಗಳಿಂದ ಅವಲೋಕಿಸಿ ಸ್ವೀಕರಿಸುವುದೇ 'ಮಾಯೆ' ಪ್ರತಿ ವಸ್ತುಗಳನ್ನು ಅಕ್ಷಿಯ ಮುಖಾಂತರ ಮೆದುಳಿಗೆ ಉಣಿಸಿ ಕಾರ್ಯಗೈಯುವುದು ವ್ಯಕ್ತಿಯ ಸ್ವಭಾವ.... ಪ್ರಜ್ಞೆ ಪ್ರತಿ ವ್ಯವಹಾರಗಳಲ್ಲಿ ಕೇಂದ್ರವಾಗಬೇಕು. ಮೆದುಳಿನ ಕ್ಷೇತ್ರದಲ್ಲಿ ಬಂದ ವಸ್ತುಗಳು ನಿರ್ದಿಷ್ಟವಾದ ಪರಿಣಾಮವನ್ನುಂಟು ಮಾಡುತ್ತವೆ. ಆಯಾ ವ್ಯಕ್ತಿಯ ಸಂಸ್ಕಾರ ಮತ್ತು ವಿವೇಕವನ್ನವಲಂಬಿಸಿ 'ನಿರ್ಧಾರ' ಪಡಲಾಗುತ್ತದೆ. 'ಪ್ರೀತಿ' ಎನ್ನುವ ವಸ್ತು ಸ್ಥಿತಿಯು ಇದಕ್ಕೆ ಸೂಕ್ತ ಉದಾಹರಣೆ. ತಾನು ಪ್ರೀತಿಸುವ ಹೆಣ್ಣು ಇನ್ನೊಬ್ಬ-ರೊಡನೆ ಮಾತಾಡಿದರೆ ತಕ್ಷಣ ದುಃಖಿಯಾಗುತ್ತಾನೆ. ಮೆದುಳು ಹೊಯ್ದಾಡುತ್ತದೆ. ಮೆದುಳು ಸೂಕ್ಷ್ಮವಾದ, ಕೊನೆಯಿಲ್ಲದ ಗ್ರಾಹಕವುಳ್ಳ ನಿರಾಕಾರ ವಸ್ತುಸ್ಥಿತಿ ನಿರ್ಮಲ ಸರೋವರದಂತೆ....ಪ್ರತಿ ಘಟನೆಗಳ ಫಲಾನುಭವಿ ವ್ಯಕ್ತಿಯ ಜೀವ.



ದುಃಖ, ನಿರಾಶೆ, ನಿಂದೆ, ನೋವುಗಳಿಂದ ಬಿಡುಗಡೆ ಹೊಂದಲು, ಪ್ರಾಪಂಚಿಕ ವಸ್ತುಗಳೇ ಕಾರಣವಾಗಿರುವುದರಿಂದ ಅವುಗಳಿಗೆ ಅಂಟಿಕೊಳ್ಳದೆ ನಿರ್ಲಿಪ್ತವಾಗಿರಲು ಸಾಧ್ಯ ಎಂಬ ತರ್ಕದಲ್ಲಿ 'ಮಾಯೆ' ಎಂದು ಹೆಸರಿಸಿದ್ದಾರೆ. ಇದ್ದರೂ ಇಲ್ಲದಂತಿರುವ ವಸ್ತುಗಳು....ಚಿತ್ತ ಚಾಂಚಲ್ಯವನ್ನುಂಟು ಮಾಡಿ ಇಡೀ ಬಾಳಿನ ಸುಖವನ್ನೇ ಅಪ-ಹರಿಸಿ ಬಿಡುವ ಪ್ರಾಲೋಭನೆಗಳಿಗೆ 'ಮಾಯೆ' ಎಂದು ಹೇಳುತ್ತಾರೆ.

ಮೂಲವಾಗಿ ಸುಖ ಹೊರಗೆಲ್ಲಿಯೂ ಸಿಗುವುದಿಲ್ಲ. ನಮ್ಮ ಅಂತರಾಳದಲ್ಲಿಯೇ ಕಾಣುವ ಕಲೆಯನ್ನು ಬೆಳೆಸಿಕೊಳ್ಳಬೇಕು 'ನಾನೇ ಎಲ್ಲವು... ನಾನಿದ್ದರೆ .. ಜಗತ್ತು. ... ಇಲ್ಲದಿದ್ದರೆ ಇಲ್ಲ....ಅಹಂ ಬ್ರಂಹ್ಮಾಸ್ಮಿ' ಎಂದು ಶಂಕರಾಚಾರ್ಯರು ಹೇಳಿದ್ದು ಈ ಹಿನ್ನೆಲೆಯಲ್ಲಿಯೇ....! ಇಡೀ ಜಗತ್ತಿನ ಕ್ರಿಯೆ, ಪ್ರತಿಕ್ರಿಯೆ, ಚಟುವಟಿಕೆ, ಗುಣ, ರಸಾನುಭವ ಎಲ್ಲವು ನಮ್ಮ ಅಂತರಂಗದಲ್ಲಿಯೇ ಇದೆ. 'ಪ್ರೀತಿಸುತ್ತಿದ್ದೇನೆ' ಎಂದು ಹೇಳಿಕೊಳ್ಳುವುದು ಸಹ ಒಂದು ಭ್ರಮೆಯೇ...! ಇದು ನಾವಾಗಿಯೇ ಕಲ್ಪಿಸಿಕೊಂಡು ಪ್ರತಿಕ್ರಿಯಿಸುತ್ತಿರುವ ಒಂದು ಫಿನಾಮೆನಾ.... ವಾಸ್ತವ್ಯವಾಗಿ ಪ್ರೀತಿಗೆ ಹೊಯ್ದಾಟ ವಿಲ್ಲ ಅದು ಶೂನ್ಯ ಮತ್ತು ಮೌನದಲ್ಲಿ ಪರಿಪೂರ್ಣತೆ ಪಡೆಯುತ್ತದೆ. ಅದೊಂದು ನಿಶ್ಯಬ್ದ ಅರುವಿನ ಅವಸ್ಥೆ.. ಹೊಯ್ದಾಟ ಹೊಂದಿರುವುದೆಲ್ಲಾ ಶಾಶ್ವತವಲ್ಲ.... ಇದಕ್ಕೆ ಬಲಿಯಾಗಿ ನಿರ್ಧಾರ ಕೈಗೊಳ್ಳುವುದೇ 'ದುಡುಕುವುದು' ಎಂದೆನಿಸಿ ಬಿಡುತ್ತದೆ. ಬುದ್ಧಿ ಮತ್ತು ಹೃದಯ–ಕಾರ್ಯಾಚರಣೆಯಲ್ಲಿ ಏಕತಾನತೆ ಇರಬೇಕು. ಬುದ್ಧಿಯು ಶಕ್ತಿಯುತವಾದಷ್ಟೇ ಹೃದಯ ನಿಯಮಿತವಾಗಿ ಕಾರ್ಯಗೈಯುತ್ತದೆ. ಅಥವಾ ಪುಪ್ಪುಸಗಳಿಂದ ಬುದ್ಧಿಯನ್ನು ಸೀಮಿತಾವಸ್ಥೆಗೆ ತಂದುಕೊಳ್ಳಬಹುದು. ಇದನ್ನೇ 'ಯೋಗಾ' ಎಂದು ಕರೆಯುತ್ತಾರೆ.

ಬಸವರಾಜ್ ಮಠಪತಿ. ರೇಷ್ಮೆ ಇಲಾಖೆ ಬೀದರ–585401

## ನಮ್ಮ ಹೆಮ್ಮೆಯ ನಾಡು-ಕರ್ನಾಟಕ

ಎರಡು ಸಾವಿರ ವರ್ಷಗಳ ಭವ್ಯ ಇತಿಹಾಸ, ಪರಂಪರೆಯ ಪುಣ್ಯಭೂಮಿಕರ್ನಾಟಕ. ಇದು ವಿವಿಧ ಮತ ಧರ್ಮಗಳ ಸಂಗಮ; ಉದಾತ್ತ ದಾರ್ಶನಿಕರು ಮತ್ತು ಮಹಾನ್ ಸಾಹಿತಿಗಳ ನೆಲೆವೀಡು. ವಿವಿಧ ರಾಜ್ಯಗಳಲ್ಲಿ ಹಂಚಿಹೋಗಿದ್ದ ಕನ್ನಡಿಗರು ಒಂದೇ ಆಡಳಿತಕ್ಕೆ ಒಳಪಟ್ಟ ಅಪೂರ್ವದಿನ ಕನ್ನಡ ರಾಜ್ಯೋತ್ಸವ ದಿನ. ರಾಷ್ಟ್ರದ ಸರ್ವತೋಮುಖ ಪ್ರಗತಿಗೆ ಕರ್ನಾಟಕದ ಕೊಡುಗೆ ಗಣನೀಯ. ರಾಷ್ಟ್ರ ನಿರ್ಮಾಣದ ಮಹತ್ಕಾರ್ಯವನ್ನು ಮುಂದುವರಿಸುವುದು ನಮ್ಮೆಲ್ಲರ ಪರಮಕರ್ತವ್ಯ.

ದಾರ್ಶನಿಕರು, ಸಮಾಜ ಸುಧಾರಕರು, ಸಾಹಿತಿಗಳು, ವಿಜ್ಞಾನಿಗಳು, ಕರ್ನಾಟಕವನ್ನು ಶ್ರೀಮಂತಗೊಳಿಸಿದ್ದಾರೆ.

'ಮಾನವ ಜಾತಿ ತಾನೊಂದೆ ವಲಂ-ಪಂಪ

"ಸರ್ವಜ್ಞನೆಂಬುವನು ಗರ್ವದಿಂದಾದವನೆ? ಸರ್ವರೊಳೊಂದೊಂದು
ನುಡಿಗಲಿತುವಿದ್ಯದಪರ್ವತವೆ ಆದ ಸರ್ವಜ್ಞ—ಸರ್ವಜ್ಞ

"ಒಂದೇ ಕರ್ನಾಟಕ ಒಂದೇ ಇಂದೆ, ಹಿಂದೆ, ಮುಂದೆ, ಒಂದೇ
ಕರ್ನಾಟಕ ಒಂದೇ, —ದ. ರಾ. ಬೇಂದ್ರೆ,

"ಈಸಬೇಕು ಇದ್ದು ಜೈಸಬೇಕು" -ಪುರಂದರದಾಸರು

"ಆತ್ಮಯಾವ ಕುಲ ಜೀವ ಯಾವ ಕುಲ ತತ್ವೇಂದ್ರಿಯಗಳ ಕುಲ
ಪೇಳಿರಯ್ಯ"—ಕನಕದಾಸರು.

"ಕಳಬೇಡ ಕೊಲಬೇಡ ಹುಸಿಯ ನುಡಿ ಯಲು ಬೇಡ ಮುನಿಯಬೇಡ
ಅನ್ಯರಿಗೆ ಅಸಹ್ಯಪಡಬೇಡ ತನ್ನ ಬಣ್ಣಿಸ ಬೇಡ ಇದಿರ ಹಳಿಯಲುಬೇಡ
ಇದೇ ಅಂತರಂಗ ಶುದ್ಧಿ ಇದೇ ಬಹಿರಂಗ ಶುದ್ಧಿ ಇದೇ ನಮ್ಮ
ಕೂಡಲ ಸಂಗಮ ದೇವನೊಲಿಸುವ ಪರಿ'' -ಬಸವಣ್ಣ.

"ಎಲ್ಲರೂ ದೇಶಾಭಿಮಾನದಿಂದ, ಸೇವಾ ಪ್ರೇಮದಿಂದ, ಕರ್ನಾಟಕ ಸಂಸ್ಕೃತಿ
ಭಾಷೆಗಳ ಸದಭಿಮಾನದಿಂದ, ಪ್ರೇರಿತರಾದರೆ ಅವರು ಹೆಚ್ಚು ಹೆಚ್ಚು
ಸುಖಿಗಳಾಗುವರು" —ಸರ್. ಎಂ. ವಿಶ್ವೇಶರಯ್ಯ

"ಬರಿಯ ಚದರ ಮೈಲಿಗಳಲ್ತು ಕರ್ನಾಟಕದದೇಶ ವಿಸ್ತೀರ್ಣಂ ನೆನೆ, ನೆನೆ,
ಮನೋಮಯದ ಸಂಸ್ಕೃತಿಯ ಕೋಶ ವಿಸ್ತೀರ್ಣಮಂ ಮರೆಯದಿರು ಚದರ
ಸಂವತ್ಸರದ ಶತಮಾನಗಳಕಾಲ ವಿಸ್ತೀರ್ಣಮಂ ಪ್ರಾಣಮಯ ಭಾವಮಯ
ವಿಸ್ತೀರ್ಣಮಂ, ಚಿದಾಕಾಶ ವಿಜ್ಞಾನ ವಿಸ್ತೀರ್ಣಮಂ' -ಕುವೆಂಪು.

"ನರಕಕ್ಕಿಳ್ಸಿ, ನಾಲ್ಗೆ ಸೀಳ್ಸಿ ಬಾಯೊಲ್ಸಾ ಕಿದ್ರೂನೆ ಮೂಗ್ನಲ್
ಕನ್ನಡ ಪದಗಳ್ನಾಡ್ತೀನಿನ್ ಮನಸ್ನ ನೀಕಾಣಿ"
-ಜಿ.ಪಿ. ರಾಜರತ್ನಂ,

"ಕರ್ನಾಟಕತ್ವವೆಂದರೆ ಕೇವಲ ದೇಶಾಭಿ ಮಾನವಲ್ಲ ಕೇವಲ ಭಾಷಾಭಿ
ಮಾನವಲ್ಲ ಇವೆಲ್ಲವುಗಳನ್ನು ಮೀರಿದ ಇವೆಲ್ಲವುಗಳನ್ನು ಒಳಗೊಂಡ
ಪರಿಶುದ್ಧ ಭಾವನೆ' —ಆಲೂರುವೆಂಕಟರಾಯರು,

" ಹಸಿರಾಯಿತು ಕರ್ನಾಟಕ ಉಸಿರಾಗಲಿ ಕನ್ನಡ "
-ಚನ್ನ ವೀರ ಕಣವಿ.

ಹರಿ291094

**ಕರ್ನಾಟಕ ರಾಜ್ಯೋತ್ಸವದ ಶುಭಾಶಯಗಳು**

ಕರ್ನಾಟಕವಾರ್ತೆ

"ಮಾಟಕೂಟ" ಎಂಬ ಮಾತ ಕೇಳಲಾಗದು, ಶಿವಾ ಶಿವಾ! ನಿಮ್ಮ ಭಕ್ತರಿಗೆ " ಮಾಡಿದೆ " ನೆನ್ನದಿರೆಂದು ಶ್ರೀ ಗುರುಲಿಂಗವು ಕೃಪೆಯ ಮಾಡಿದ ಕಾರಣ, ಅಲ್ಲಿ ಮಾಡುವವರೂ ಮಾಡಿಸಿ ಕೊಂಬವರೂ ನೀವೇ ಕೂಡಲಸಂಗಮದೇವಾ.

ಹಮ್ಮಿನ ಭಕ್ತಿ ಕರ್ಮಕ್ಕೆ ಮೊದಲು, ಮರ್ಮವನರಿಯದ ಮಾಟ ಮುಯಿದಾನದ ಕೇಡು ! ಬಂದ ಸಮಯೋಚಿತವನರಿಯದಿದ್ದರೆ ನಿಂದಿರಲೊಲ್ಲ ಕೂಡಲಸಂಗಮ ದೇವಾ.

—ಶ್ರೀ ಬಸವೇಶ್ವರ



ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ, ಶ್ರೀ ಸಿದ್ಧಗಂಗಾಮಠ,